CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೨, ೨೦೦೪ (ಮಾರ್ಗಶಿರ ೧೧, ಶಕ ವರ್ಷ ೧೯೨೬) | ಸಂಚಿಕೆ ೪೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಆರ್.ಕೆ. ಕರಿರಾಯನಗೌಡ್ರ, ಕೃಷಿ ಸಹಾಯಕ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತುಕ್ರಮ.

**ಓದಲಾಗಿದೆ:**
1. ಜಿಲ್ಲಾ ಉಪ ಕೃಷಿ ನಿರ್ದೇಶಕರು, ಗದಗ ಇವರ ಪತ್ರ ಸಂಖ್ಯೆ:ಸಿಬ್ಬಂದಿ-1:ಖಾಪೋಸೇಪೋ:ಸಿಆರ್-11:9954: 98-99, ದಿನಾಂಕ:2:5.2.2001.
2. ಈ ಕಛೇರಿಯ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-7:11:2002-03, ದಿನಾಂಕ: 9.4.2003.
3. ಶ್ರೀ ಆರ್.ಕೆ. ಕರಿರಾಯನಗೌಡ್ರ, ಕೃಷಿ ಸಹಾಯಕರ ಸ್ವೀಕೃತಿ ಪತ್ರ ದಿನಾಂಕ 4.5.2003.
4. ಈ ಕಛೇರಿಯ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-7:11:02-03, ದಿನಾಂಕ: 21.8.2003.
5. ಈ ಕಛೇರಿಯ ಎರಡನೇ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-1: ವಿಚಾರಣೆ-7:11:02-03, ದಿನಾಂಕ: 28-1:10.2.2004.
6. ಶ್ರೀ ಆರ್.ಕೆ. ಕರಿರಾಯನಗೌಡ್ರ, ಕೃಷಿ ಸಹಾಯಕರ ಸ್ವೀಕೃತಿ ಪತ್ರ ದಿನಾಂಕ 8.3.2004 ಹಾಗೂ ಹೇಳಿಕೆ ದಿನಾಂಕ: ಇಲ್ಲ.

**ಪ್ರಸ್ತಾವನೆ:**

ಶ್ರೀ ಆರ್.ಕೆ. ಕರಿರಾಯನಗೌಡ್ರ, ಕೃಷಿ ಸಹಾಯಕರು, ಹಿಂದಿನ ಸಹಾಯಕರ ಕೃಷಿ ನಿರ್ದೇಶಕರ ಕಛೇರಿ, ಗದಗ, ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಮುಂಡರಗಿ, ಗದಗ ಜಿಲ್ಲೆ ಇವರು ಸಹಾಯಕ ಕೃಷಿ ನಿರ್ದೇಶಕರು, ಶಿರಹಟ್ಟಿ ಇವರ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ:23.5.88 ರಿಂದ 26.10.89 ಮತ್ತು ದಿನಾಂಕ 22.3.90 ರಿಂದ 9.6.93 ರವರೆಗಿನ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿದ್ದ ಬಗ್ಗೆ ಓದಲಾದ (1)ರ ಪತ್ರ ಮುಖೇನ ಜಿಲ್ಲಾ ಉಪ ಕೃಷಿ ನಿರ್ದೇಶಕರು, ಗದಗ ಇವರು ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿದ್ದರು. ಸಿಬ್ಬಂದಿ ವಿಭಾಗದಲ್ಲಿ ಕಡತವನ್ನು ಪರಿಶೀಲಿಸಿದಾಗ ಸದರಿ ನೌಕರರು ದಿನಾಂಕ: 23.5.88 ರಿಂದ 22.10.89 ಮತ್ತು 23.3.90 ರಿಂದ 9.6.93 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿ ಇದ್ದ ಪ್ರಯುಕ್ತ ಕಡತವನ್ನು ಶಿಸ್ತುಕ್ರಮಕ್ಕಾಗಿ ವಿಚಾರಣಾ ವಿಭಾಗಕ್ಕೆ ಹಸ್ತಾಂತರಿಸಲಾಯಿತು. ಇವರ ವಿರುದ್ಧದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾದ ಆರೋಪದ ಬಗ್ಗೆ ದೋಷಾರೋಪಣಾ ಪಟ್ಟಿಗಳನ್ನು ಅನುಬಂಧ-1 ರಿಂದ 4 ರವರೆಗೆ ತಯಾರಿಸಿ ಓದಲಾದ (2)ರಲ್ಲಿನ ಈ ಕಛೇರಿಯ ಸೂಚನಾ ಪತ್ರ ಮುಖಾಂತರ ಆರೋಪಿತರಿಗೆ ಜಾರಿಗೊಳಿಸಿ ಆರೋಪಗಳನ್ನು ಒಪ್ಪುವ ಅಥವಾ ನಿರಾಕರಿಸುವ ಬಗ್ಗೆ ಪ್ರತಿವಾದವನ್ನು ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಲಾಯಿತು. ದೋಷಾರೋಪಣಾ ಪಟ್ಟಿಗಳನ್ನು ಪಡೆದ ಆರೋಪಿತರು ಓದಲಾದ (3)ರಲ್ಲಿನ ಸ್ವೀಕೃತಿ ಪತ್ರವನ್ನು ಸಲ್ಲಿಸಿರುತ್ತಾರೆ. ಆದರೆ, ನಿಗದಿತ ಕಾಲಾವಧಿ ಕಳೆದರೂ ಸಹ ಪ್ರತಿವಾದವನ್ನು ಸಲ್ಲಿಸಿರುವುದಿಲ್ಲ. ಇವರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಂಶವನ್ನು ತಿಳಿದುಕೊಳ್ಳುವ ಸಲುವಾಗಿ ಪ್ರಕರಣದ ವಿವರವಾದ ವಿಚಾರಣೆ ನಡೆಸಲು ನಿರ್ಧರಿಸಿ ಓದಲಾದ (4)ರಲ್ಲಿನ ಈ ಕಚೇರಿ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ಹಾಗೂ ಮಂಡನಾಧಿಕಾರಿಗಳನ್ನು ನೇಮಕಾತಿ ಮಾಡಲಾಯಿತು. ಸಿಸಿಎ ನಿಯಮ 11 ರಲ್ಲಿನ ನಿಬಂಧನೆಗಳಿಗನುಸಾರವಾಗಿ ಪ್ರಕರಣದ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಆರೋಪಿತರ ವಿರುದ್ಧದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾದ ಆರೋಪವು ಸಾಬೀತಾಗಿರುತ್ತದೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಓದಲಾದ (5)ರಲ್ಲಿನ ಈ ಕಛೇರಿಯ ಎರಡನೇ ಸೂಚನಾ ಪತ್ರದೊಂದಿಗೆ ಆರೋಪಿತರಿಗೆ ಜಾರಿಗೊಳಿಸಿ ಆರೋಪವು ಸಾಬೀತಾಗಿರುವುದರಿಂದ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಹೇಳಿಕೆ ಸಲ್ಲಿಸುವಂತೆ ಸೂಚಿಸಲಾಯಿತು. ಈ ಸೂಚನಾ ಪತ್ರವನ್ನು ಹಾಗೂ ವಿಚಾರಣಾ ವರದಿಯನ್ನು ಪಡೆದ ಆರೋಪಿತರು ಓದಲಾದ (6) ರಲ್ಲಿನ ದಿನಾಂಕ: 8.3.2004ರ ಸ್ವೀಕೃತಿ ಪತ್ರವನ್ನು ಸಲ್ಲಿಸಿರುತ್ತಾರೆ. ಹಾಗೂ ಹೇಳಿಕೆ ಸಲ್ಲಿಸಿದ ಇವರು

ಆರೋಪವನ್ನು ಒಪ್ಪಿಕೊಂಡಿದ್ದು, ಆಗಿರುವ ತಪ್ಪನ್ನು ಕ್ಷಮಿಸಲು ಕೋರಿದ್ದಾರೆ. ಇವರ ವಿರುದ್ಧದ ಆರೋಪವು ಸಾಬೀತಾಗಿರುವ ಪ್ರಯುಕ್ತ ಈ ಕೆಳಕಂಡಂತೆ ದಂಡನಾದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ:ಸಿಬ್ಬಂದಿ-1:ವಿಚಾರಣೆ-7:11:2002-03 ದಿನಾಂಕ: 8ನೇ ನವೆಂಬರ್ 2004**

ಈ ಕೆಳಗೆ ಸಹಿ ಮಾಡಿರುವ ಕೃಷಿ ನಿರ್ದೇಶಕರಾದ ಶ್ರೀ ಜಿ. ಪ್ರಕಾಶ್ ಆದ ನಾನು ಈ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಆರ್.ಕೆ. ಕರಿರಾಯನಗೌಡ್ರ, ಕೃಷಿ ಸಹಾಯಕರು ಹಿಂದಿನ ಸಹಾಯಕ ಕೃಷಿ ನಿರ್ದೇಶಕರ ಕಚೇರಿ, ಗದಗ ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಮುಂಡರಗಿ ಇವರನ್ನು ಆರೋಪಿಯೆಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

ಶ್ರೀ ಆರ್.ಕೆ. ಕರಿರಾಯನಗೌಡ್ರ, ಕೃಷಿ ಸಹಾಯಕ ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾದ ದಿನಾಂಕ: 23.5.1988 ರಿಂದ 22.10.1989 ಮತ್ತು 22.3.1990 ರಿಂದ 9.6.1993ರವರೆಗಿನ ಕಾಲಾವಧಿಯನ್ನು ಅನಧಿಕೃತ ಗೈರುಹಾಜರಿಯೆಂದೇ ಪರಿಗಣಿಸಲು ಆದೇಶಿಸಿರುತ್ತೇನೆ.

ಶ್ರೀ ಆರ್.ಕೆ. ಕರಿರಾಯನಗೌಡ್ರ, ಕೃಷಿ ಸಹಾಯಕ, ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಚೇರಿ, ಮುಂಡರಗಿ, ಗದಗ ಜಿಲ್ಲೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 8 (vi) ರ ಅಡಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿರುತ್ತೇನೆ.

ಪಿ.ಆರ್. 1579 ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ**

**ಸಂಖ್ಯೆ: ಡಬ್ಲ್ಯುಸಿಎ:ಸಿಆರ್-23/ಎಫ್‌ಸಿ/2004/38, ದಿನಾಂಕ: 29ನೇ ಅಕ್ಟೋಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮಹಾಬಲ ಶೇರಿಗಾರ್, (2) ಶ್ರೀಮತಿ ಶೇಷಮ್ಮ,
(3) ಸರಸ್ವತಿ, (4) ಸುಧಾಕರ, (5) ಮಂಜುನಾಥ,
(6) ರಮೇಶ್
ವಾಸ: ಬೈಂದೂರು ಗ್ರಾಮ, ಕುಂದಾಪುರ.

1. ಶ್ರೀ ಚಂದ್ರಹಾಸ್ ಅಮೀನ್, ಪ್ಲಾಟ್ ನಂ-5-3,
ಫಮೆಂಗ್ ಅಪಾರ್ಟ್‌ಮೆಂಟ್, ಮಾರಿಸ್ ಕಾಲೋನಿ,
ನೀರಾಹರ, ಪಣಜಿ, ಗೋವಾ.
2. ದಿ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
ಎ.ಬಿ. ರೋಡ್, ಪಣಜಿ, ಗೋವಾ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಮಹಾಬಲ ಶೇರಿಗಾರ್ ಇವರು ತಮ್ಮ ಮಗನಾದ ಶ್ರೀ ಚಂದ್ರ ಕೆ. ಇವರು ಪ್ರತಿವಾದಿಗಳಾದ ಶ್ರೀ ಚಂದ್ರಹಾಸ್ ಅಮೀನ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ 19.8.2004 ರಂದು ಅಪಘಾತಕ್ಕೀಡಾಗಿ ಮೃತರಾದವರೆಂದು ಹೇಳಿ ಅಶ್ರೀತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್.ಕೆ. ಷಣ್ಮುಗಪ್ಪ**

ಪಿ.ಆರ್. 1580 ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ.

**Office of the Executive Engineer, K.B.J.N.L, IBC, Division, Yankanchi,**

**NOTIFICATION**

**No: K.B.J.N.L/IBC/DN/YNK/WCCS/PB-1/04-05/2033, Dated: 29th October 2004**

**(See Section-2(A) of the Act)**

**See Notification No. ID-16-NPC-2000(P) Dated: March 2001**

In exercise of the powers conferred by (1) clause (3) Section (2) of the Karnataka Irrigation Act-1965 and (2) Notification No:ID:16:NPC:2001 dated 8.3.2001 and irrigation officer hereby notifies the areas of operation as specified in clause (3) and (A) of the table below for the water Users Society, as (W.U.S).

| Sl. No. | Name of the Distributory sub-distributory, Minor lateral, direct pipe culvert. | Area to be irrigated in the area of operated | |
|---|---|---|---|
| | | Name of the village | Extent of irrigated Area |
| 1. | ALMEL<br>IBC Dy-13, L-19, Sub-L-3 and L-9, Sub-L-3A:3 | ALMEL Tq:Sindgi. | 574.14 Ha |

**SHRINOOR AHMED**

P.R. 1581 Executive Engineer, KBJNL IBC Division, Yankanchi

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-306/04, ದಿನಾಂಕ: 6ನೇ ನವೆಂಬರ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಎನ್.ಆರ್. ಹನುಮಂತಪ್ಪ ಬಿನ್ ರಾಮಯ್ಯ
2. ಗಂಗಮ್ಮ ಕೋಂ ಎನ್.ಆರ್. ಹನುಮಂತಪ್ಪ
ವಾಸ: ಬಿಳಚೋದು ಗ್ರಾಮ, ಜಗಳೂರು ತಾಲ್ಲೂಕು.

1. ಬಿ.ಕೆ. ಇಸ್ಮಾಯಿಲ್ ಸಾಬ್ ಬಿನ್ ಮಹಮದ್ ಬಾರಿ
ಪಿ.ಡಬ್ಲ್ಯು.ಡಿ. ಕಂಟ್ರಾಕ್ಟರ್ ಟಿಪ್ಪರ್ ಲಾರಿ ಮಾಲೀಕರು
ನಂ.ಕೆ.ಎ.16/7866 ವಾಸ: ಬಸವೇಶ್ವರ ಕಾಲೋನಿ,
ರಾಂ. ಪುರ, ಮೊಳಕಾಲ್ಮೂರು ತಾಲ್ಲೂಕು.
2. ದಿ ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ
ಇನ್ಸೂರೆನ್ಸ್ ಕಂ.ಲಿ., ಅಕ್ಕಮಹಾದೇವಿ ರೋಡ್, ದಾವಣಗೆರೆ.

**ಪ್ರಕಟಣೆ**

ಶ್ರೀ ಎನ್.ಆರ್. ಹನುಮಂತಪ್ಪ ಬಿನ್ ರಾಮಯ್ಯ ಗಂಗಮ್ಮ ಕೋಂ ಎನ್.ಆರ್. ಹನುಮಂತಪ್ಪ ಇವರುಗಳಾದ ತಾವು ಮೃತ ಎನ್.ಎಚ್. ಮಲ್ಲಿಕಾರ್ಜುನ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎನ್.ಎಚ್. ಮಲ್ಲಿಕಾರ್ಜುನ ರವರು ಒಂದನೇ ಪ್ರತಿವಾದಿಗಳಾದ ಬಿ.ಕೆ. ಇಸ್ಮಾಯಿಲ್ ಇವರ ಟಿಪ್ಪರ್ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1582 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ನಂ.ಕಾಪಕಾ:ಎಫ್:ಎಸ್ಆರ್-45/2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ಶಂಭುಲಿಂಗೇಗೌಡ ಬಿನ್ ಮರಿಗೌಡ<br>2. ಜವರಮ್ಮ ಉರುಫ್ ಅಮ್ಮಯಮ್ಮ ಕೋಂ ಶಂಭುಲಿಂಗೇಗೌಡ, ಹುರಿಗಲವಾಡಿ ಗ್ರಾಮ, ಗಂಡಸಿ ಹೋಬಳಿ, ಅರಸೀಕೆರೆ ತಾ:, ಹಾಸನ ಜಿಲ್ಲೆ. | | 1. ಶ್ರೀ ಕೆ. ಭಾಸ್ಕರ್ ಬಿನ್ ಲೇಟ್ ಶಾಂತಪ್ಪಯ್ಯ, ಶ್ರೀ ದೇವಿ ಕೃಪ ನಂ.323, ಪೈಪ್‌ಲೈನ್ ರಸ್ತೆ, ಎಂ.ಇ.ಎಸ್.ರೋಡ್, ಜಾಲಹಳ್ಳಿ, ಬೆಂಗಳೂರು-13.<br>2. ಡಿವಿಜನಲ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಡಿವಿಜನಲ್ ಆಫೀಸ್, ಕಾಫಿ ಕೃಪ ಬಿಲ್ಡಿಂಗ್, ಎಂ.ಜಿ. ರಸ್ತೆ, ಮಡಿಕೇರಿ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ತೋಟೇಶ್ ಉರುಫ್ ತೋಟದೇಶ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 21.10.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್. 1583 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ನಂ.ಕಾಪಕಾ:ಎಫ್:ಎಸ್ಆರ್-43/2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ಅಮೀರ್ ಷರೀಫ್ ಬಿನ್ ಲೇಟ್ ಮಹಮ್ಮದ್ ಷರೀಫ್, 60 ವರ್ಷ<br>2. ಶ್ರೀಮತಿ ಖಾತಿಜಾಬಿ, ಕೋಂ ಅಮೀರ್ ಷರೀಫ್, 55 ವರ್ಷ<br>3. ಸಾಹಿರಾಬಾನು ಬಿನ್ ಅಮೀರ್‌ಷರೀಫ್, 20 ವರ್ಷ ವಾಸ:ಬೆಸ್ತರಬೀದಿ, ಚಿಪ್ಪಿನಕಟ್ಟೆ, ಹಾಸನ. | | 1. ಶ್ರೀ ಮಹಬೂಬ್ ಷರೀಫ್ ಬಿನ್ ಹುಸೇನ್ ಷರೀಫ್ ಸಿಎನ್‌ಜಿ 9591ರ ಡ್ರೈವರ್ ಕಮ್ ಮಾಲೀಕರು, ಮಿರ್ಜಾ ಮೊಹಲ್ಲಾ, ಹಾಸನ.<br>2. ದಿ ಡಿವಿಜನಲ್ ಮ್ಯಾನೇಜರ್, ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ಶ್ರೀ ವೆಂಕಟೇಶ್ವರ ಬಿಲ್ಡಿಂಗ್ಸ್, ಹಾಸನ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮೆಹಬೂಬ್ ಷರೀಫ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 10.8.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್. 1584 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ನಂ.ಕಾಪಕಾ:ಎಫ್:ಎಸ್ಆರ್-44/2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಶಾಹೀನಾಪರ್ವಿನ್ ಕೋಂ ಮೆಹಬೂಬ್ ಷರೀಫ್, 32 ವರ್ಷ ವಯಸ್ಸು
2. ಪರಹ ಬಾನು ಬಿನ್ ಮೆಹಬೂಬ್ ಷರೀಫ್, 11 ವರ್ಷ ವಯಸ್ಸು.
3. ಅಹೀಶಾ ಸುಲ್ತಾನ್ ಬಿನ್ ಮೆಹಬೂಬ್ ಷರೀಫ್, 9 ವರ್ಷ ವಯಸ್ಸು
4. ಅಮೀರ್ ಷರೀಫ್, (5) ಹುತ್ತೇಜಾಬಿ ಕೋಂ ಅಮೀರ್ ಷರೀಫ್, ವಾಸ:1ನೇ ಕ್ರಾಸ್, ಚಿಪ್ಪಿನಕಟ್ಟೆ ಬಡಾವಣೆ, ಹಾಸನ ನಗರ.

ಪ್ರತಿವಾದಿಗಳು:

1. ಮಹಬೂಬ್ ಷರೀಫ್ ಬಿನ್ ಹುಸೇನ್ ಷರೀಫ್ ಹುಸೇನ್ ಷರೀಫ್ ಲಾರಿ ಮಾಲೀಕರು, ಮಿರ್ಜಾ ಮೊಹಲ್ಲಾ, ವಲ್ಲಭಾಯಿ ರಸ್ತೆ, ಹಾಸನ. (ಸಿಎನ್‌ಜಿ 9591ರ ಲಾರಿ ಮಾಲೀಕರು)
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ಎಸ್.ವಿ.ನಿಲಯ, ಬಿ.ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮೆಹಬೂಬ್ ಷರೀಫ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 10.8.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್. 1585 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಕೆರೆಸಂತೆ ಗ್ರಾಮದಲ್ಲಿ ಕ್ವಾರ್ಟ್ಜೈಟ್ ಶಿಲೆಗಾಗಿ ಮೆ: ನೇಚರ್ ಸ್ಟೋನ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:434ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು,434:2004-05:2673 ದಿ:12-8-2004.
2. ಹಿರಿಯ ಭೂವಿಜ್ಞಾನಿ (ಖ), ಕೋಲಾರರವರ ಪತ್ರ ಸಂಖ್ಯೆ: ಗಭೂಇ: ಹಿಭೂಚಿ:ಡಿಸಿಬಿ:ಕಗಗು 434:2004-05:733 ದಿ:10.6.2004

**ಪ್ರಸ್ತಾವನೆ:**

ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು ಕೆರೆಸಂತೆ ಗ್ರಾಮದ ಸರ್ವೆ ನಂ. 334:4 ರಲ್ಲಿ ಮೆ: ನೇಚರ್ ಸ್ಟೋನ್ ರವರಿಗೆ 0.20 ಎಕರೆಗೆ ದಿನಾಂಕ:2.5.2001 ರಿಂದ 5 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.27,256.00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:434:2004-05/11391 ದಿನಾಂಕ: 8ನೇ ನವೆಂಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಕೆರೆಸಂತೆ ಗ್ರಾಮದ ಸರ್ವೆ ನಂ.334:4 ರಲ್ಲಿ 0.20 ಎಕರೆಗೆ ಕ್ವಾರ್ಟ್ಜೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 434 ನ್ನು ತಕ್ಷಣದಿಂದ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು

ಪಿ.ಆರ್. 1586 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಬೊಮ್ಮಸಂದ್ರ ಗ್ರಾಮದಲ್ಲಿ ಬ್ಲಾಕ್ ಗ್ರಾನೈಟ್‌ಗಾಗಿ ಶ್ರೀ ಎಂ. ಜುಲ್ಫಿಕರ್ ಆಲಿ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 424ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು 424:2003-04:19248 ದಿನಾಂಕ:9.3.2004 ಮತ್ತು 3.9.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಡಿ.ಸಿ.ಬಿ.:ಕಗಗು 424:2004-05:7731 ದಿ:25.9.2004

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಬೊಮ್ಮಸಂದ್ರ ಗ್ರಾಮದ ಸರ್ವೆ ನಂ. 30 ರಲ್ಲಿ ಶ್ರೀ ಎಂ. ಜುಲ್ಫಿಕರ್ ಆಲಿ ರವರಿಗೆ ರವರಿಗೆ 2-00 ಎಕರೆಗೆ ದಿನಾಂಕ:26.3.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ

ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.78,698/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:434:2003-04/11382 ದಿನಾಂಕ: 8ನೇ ನವೆಂಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಬೊಮ್ಮಸಂದ್ರ ಗ್ರಾಮದ ಸರ್ವೆ ನಂ.30 ರಲ್ಲಿ 2.00 ಎಕರೆಗೆ ಬ್ಲಾಕ್ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 424 ರ ಗುತ್ತಿಗೆ ನಿಷ್ಕ್ರಿಯವಾಗಿಟ್ಟಿರುವ ಕಾರಣ ಗುತ್ತಿಗೆಯನ್ನು ನಿಯಮದಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು

ಪಿ.ಆರ್. 1587 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಗುಲ್ಬರ್ಗಾ ಜಿಲ್ಲೆ, ಶೋರಾಪುರ ತಾಲ್ಲೂಕು, ಬಾದ್ಯಾಪುರ ಗ್ರಾಮದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಮೆ: ಕನಕ ಗ್ರಾನೈಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 346ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು 346:2002-03:13677 ದಿನಾಂಕ:29.3.2004.
2. ಹಿರಿಯ ಭೂವಿಜ್ಞಾನಿ (ಖ), ಗುಲ್ಬರ್ಗಾ ರವರ ಪತ್ರ ಸಂಖ್ಯೆ: ಗಭೂಇ:ಲೋಪಶಾ:ಕಗಗು:346:2004-05:1479 ದಿ:28.8.2004.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಶೋರಾಪುರ ತಾಲ್ಲೂಕು, ಬಾದ್ಯಾಪುರ ಗ್ರಾಮದಲ್ಲಿ ಸರ್ವೆ ನಂ. 155 ರಲ್ಲಿ ಮೆ: ಕನಕ ಗ್ರಾನೈಟ್ಸ್ ರವರಿಗೆ 1.11 ಎಕರೆಗೆ ದಿನಾಂಕ:23.6.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,59,632.00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ 92 ದಿನಾಂಕ:2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:346:2004-05/11373 ದಿನಾಂಕ: 8ನೇ ನವೆಂಬರ್ 2004**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಗುಲ್ಬರ್ಗಾ ಜಿಲ್ಲೆ, ಶೋರಾಪುರ ತಾಲ್ಲೂಕು, ಬಾದ್ಯಾಪುರ ಗ್ರಾಮದ ಸರ್ವೆ ನಂ.155 ರಲ್ಲಿ 1.11 ಎಕರೆಗೆ ಪಿಂಕ್ ಗ್ರಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 346ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದ ಕಾರಣ ತಕ್ಷಣದಿಂದ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು

ಪಿ.ಆರ್. 1588 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಪ್ರಾರಂಭಿಕ ಅಧಿಸೂಚನೆ**

**ನಂ: ಕೆ.ಎಸ್.ಎ. ಸಿಆರ್ 41/2001-02, ದಿನಾಂಕ: 25ನೇ ಅಕ್ಟೋಬರ್ 2004**

ಬೆಂಗಳೂರು ನಗರ ವ್ಯಾಪ್ತಿಯ ಜಯನಗರ ಟಿ.ಬಿ. ಆಸ್ಪತ್ರೆಯ ಕಾಂಪೌಂಡ್ ಪಕ್ಕದ ಬೈರಸಂದ್ರ ಗ್ರಾಮದ ಸರ್ವೆ ನಂ.1/4 ರ ಬಿ.ಡಿ.ಎ. ಆಸ್ತಿಯಲ್ಲಿರುವ ಪ್ರದೇಶದಲ್ಲಿ ಸುಮಾರು 75 ಕುಟುಂಬಗಳಿದ್ದು, ಹಾಲಿ ಇರುವ ಗುಡಿಸಲು ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಕೊಳಚೆ ನಿರ್ಮೂಲನಾ ಮಂಡಳಿಯು ವರದಿ ಮಾಡಿದ್ದು, ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ದತ್ತವಾಗಿರುವ ಅಧಿಕಾರದಂತೆ, ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ'ವೆಂದು ಘೋಷಿಸಲು ಉದ್ದೇಶಿಸಿದೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಶೇಷಾದ್ರಿಪುರಂ, ಬೆಂಗಳೂರು-20 ರವರಿಗೆ ಲಿಖಿತ ಮೂಲಕ ಅಂತಹ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರುನಗರ, ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯ, ಜಯನಗರ ಟಿ.ಬಿ. ಆಸ್ಪತ್ರೆಯ ಕಾಂಪೌಂಡ್ ಪಕ್ಕದ ಬೈರಸಂದ್ರ ಸರ್ವೆ ನಂ.1/4 ರ ಬೆಂಗಳೂರು ಇಲ್ಲಿರುವ ಕೊಳಚೆ ಪ್ರದೇಶದ ಚೆಕ್ಕಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶವಾದ ಜಮೀನಿನ ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1. | ಜಯನಗರ ಟಿ.ಬಿ. ಆಸ್ಪತ್ರೆ, ಕಾಂಪೌಂಡು ಪಕ್ಕದಲ್ಲಿರುವ ಕೊಳಚೆ ಪ್ರದೇಶ | ಬಿ.ಡಿ.ಎ. | 1/4 | 0-08 | ಸುಬ್ಬರಾಯರು ಮತ್ತು ಶ್ರೀರಾಂರವರ ಮನೆಗಳು | ಟಿ.ಬಿ. ಸ್ಯಾನಿಟೋರಿಯಂ ಕಾಂಪೌಂಡ್ | ಟಿ.ಬಿ. ಆಸ್ಪತ್ರೆ ಕಾಂಪೌಂಡ್ | ತ್ಯಾಗರಾಜ್ ರವರ ಆಸ್ತಿ |

**ಎಂ.ಎ. ಸಾಧಿಕ್**

ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ ಸಂಖ್ಯೆ:ಎಲ್.ಆರ್.ಎಫ್/ಸಿಆರ್-38/04-05, ದಿನಾಂಕ: 21ನೇ ಅಕ್ಟೋಬರ್ 2004**

**ವಿಷಯ:** ಯು.ಕೆ.ಮೆಮೋರಿಯಲ್ ಅಂಡ್ ಎಜುಕೇಷನ್ ಟ್ರಸ್ಟ್ (ರಿ), ನಂ.37/38, ರಾಮರೆಸಿಡೆನ್ಸಿ ಆಸ್ಪತ್ರೆ ರಸ್ತೆ, ಬೆಂಗಳೂರು 01 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ ಸರ್ವೆ ನಂ. 63ರಲ್ಲಿ 1-15 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಯು.ಕೆ.ಮೆಮೋರಿಯಲ್ ಅಂಡ್ ಎಜುಕೇಷನ್ ಟ್ರಸ್ಟ್ (ರಿ), ನಂ.37/38, ರಾಮರೆಸಿಡೆನ್ಸಿ ಆಸ್ಪತ್ರೆ ರಸ್ತೆ, ಬೆಂಗಳೂರು-01 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ, ಸರ್ವೆ ನಂ. 63 ರಲ್ಲಿ 1-15 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ 15 ಎ ಮತ್ತು ನಮೂನೆ 15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರ ಸಂ: ಎಲ್.ಆರ್.ಎಫ್:ಸಿ.ಆರ್:ಬಿ.ಎನ್.ಎ.51/04-05, ದಿನಾಂಕ: 24.9.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 63 ರಲ್ಲಿ 1-15 ಎಕರೆ:ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)(11)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ ಶಿವಾಜಿನಗರ, ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ:20.7.2002 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ, ಸರ್ವೆ ನಂ. 63 ರಲ್ಲಿ 1-15 ಎಕರೆ:ಗುಂಟೆ ಜಮೀನನ್ನು ಯು.ಕೆ.ಮೆಮೋರಿಯಲ್ ಅಂಡ್ ಎಜುಕೇಷನ್ ಟ್ರಸ್ಟ್ (ರಿ), ನಂ.37/38, ರಾಮರೆಸಿಡೆನ್ಸಿ ಆಸ್ಪತ್ರೆ ರಸ್ತೆ, ಬೆಂಗಳೂರು 01 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ಅಧಿಸೂಚನೆ ತಿದ್ದುಪಡಿ ಸಂ: ಶಾಇ 47 ಶಾಸನ 2001 ಬೆಂಗಳೂರು ದಿ: 23.4.2003ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಜಮೀನು ಖರೀದಿಸಲು ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾವಣೆ ಮಾಡಬಾರದು.

3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಭೂ ಉಪಯೋಗದ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.

4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.

5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರುವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಎಂ.ಎ. ಸಾಧಿಕ್
ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 1589

**IN THE COURT OF THE ADDITIONAL REGISTRAR OF CO-OPERATIVE SOCIETIES (CONSUMERS & MARKETING) BANGALORE - 560 052, OFFICE OF THE REGISTRAR OF CO-OPERATIVE SOCIETIES, No. 1, ALI ASKER ROAD, BANGALORE - 560 052**

**Dispute No. A(C & M) Dis/ D2/ 3133/ 2004-05**

**Present: Sri V. Channappa**

**Additional Registrar of Co-op. Societies. (Consumers & Marketing)**

**PETITIONER**

The Managing Director,
Malanadu Arecanut Marketing Co-op. Society Ltd., (MAMCOS) Post Box No. 13, APMC Yard Shimoga.

Vs

**RESPONDENT**

1. M/s Sree Ram Traders Areca Merchants No.5, APMC Yard, Sagara rep.by its Managing Partner, Sree S.T. Aswini Kumar
2. Sree S.T. Aswini Kumar, Managing Partner, M/s Sree Ram Traders, Areca Merchants, No.5, APMC Yard, Sagara.
3. Smt Jayalaxmi, W/o Sree S.R. Thimmappa Partner, M/s Sree Ram Traders Areca Merchants, No.5, APMC Yard, Sagara.
4. Miss S.T. Roopa, D/o S.R. Thimmappa, Partner, M/s Sree Ram Traders Areca Merchants, No.5, APMC Yard, Sagara.

**CONFIRMATION OF NOTICE OF CONDITIONAL ATTACHMENT OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT 1959**

1. The Petitioner has filed the above dispute before me u/s 70 of the Karnataka co-operative Societies act 1959 for recovery of a sum of Rs. 90,41,993-00 along with interest at 16% on the principal amount from 1.4.2004 till the date of realisation from the Respondents. The dispute is taken on file under Dispute No. A(C & M) DW/D2/3133/2004-05.

2. It is brought to my notice by the Petitioner by an application filed under section 103 of the Karnataka Co-operative Societies Act 1959, that the Respondents are contemplating to convey or alienate or dispose the immovable properties belonging to the Respondents, with the intent to delay the enforcement or execution of any award or order that may be passed in the above dispute against them.

3. The Petitioner has further stated that if the Respondents are not prevented from doing so, the Petitioner society will be left with no means to recover the amount even if any award/decree is obtained against the Respondents.

4. I am fully convinced that the disposal of Schedule Property of the Respondents would defeat or delay the enforcement or execution of any order/decree that may be passed against the Respondents.

Hence, I had ordered to issue the notice on 9.8.2004 to the person's concerned and interested in purchasing or acquiring the properties.

Further it was informed to the Respondents that if they desired to have the conditional attachment raised, they should furnish cash security to the extent of Rs.90,42,000.00 (Rupees Ninety lakhs forty two thousand only) by depositing the said amount in the Petitioner Co-operative society in the name of the Additional Registrar of Co-operative Societies (Consumer and Marketing), Bangalore under Suspense Account and produce the original receipt/challan issued thereon to this office on or before 13.9.2004 without fail and further if they fail to furnish the cash security as ordered above within the stipulated period, this conditional attachment will be made absolute.

After the completion of said period the case is taken for hearing on 16.10.2004 as it is seen from the record that the notices were duly served on the parties and the respondents prayed one month time through Fax letter dated 13.9.2004, I am of the opinion to confirm the conditional attachment notice dated: 9.8.2004. Therefore I pass the following order.

**ORDER**

The conditional attachment notice dated: 9.8.2004 is made absolute in respect of properties belonging to the Respondents mentioned in the schedule below which are hereby attached pending disposal of the dispute.

## SCHEDULE OF PROPERTY

1. The below properties standing in the name of Smt. Rajashree, W/o Sree S.T. Ashwini Kumar, the Managing Partner of M/s Sree Ram Traders, Areca Merchant's No.5, APMC Yard, Sagara, situated at ward No.15, bearing katha No. 122, Assessment No. 122/185, Sagara Town, Sagara Taluk, Shimoga District, measuring.

1. 7.45 x 11.60M
   7.45 x 11.75M Mangalore Tiles House.
   T.A. 20.5 x 181.5
2. The property bearing katha No. A.No. 123/123/186, measuring.
   6.227 x 11.60M
   6.227 x 11.75M Mangalore Tiles House
   T.A. 20.5 x 181.5

II. The property standing in the name of Sri S.T. Aswini Kumar, Managing Partner of M/s Sree Rama Traders, Areca Merchants, No.5, APMC Yard, Sagara, situated at ward No. 12, bearing katha No. Assessment No. 229/229/115, Site measuring 50 x 94 Sagara Town, Sagara Taluk, Shimoga District.

Given under my hand and seal this the 16th day of October 2004.

P.R. 1590 Additional Registrar of Co-op.societies (Consumer & Marketing).

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ.ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/145/1998-99, ದಿನಾಂಕ: 27ನೇ ಅಕ್ಟೋಬರ್ 2004**

**ಉಪಸ್ಥಿತರು** : ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು** : ಯು.ಕೆ. ನಾಯ್ಕ, ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಕಾರವಾರ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಅರ್ಜಿದಾರ** : ಎಸ್.ಎಚ್. ಲಕ್ಷ್ಮಿಕ್ರಾಂತ್, ತಂದೆ ಎಸ್.ಪಿ. ಹನುಮಂತಯ್ಯ, ಮನೆ ನಂ. 230/1, 15ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-3 ಇವರ ಪರವಾಗಿ ಜಿ.ಪಿ.ಎ. ಧಾರಕರಾದ ಜಿ. ಅಂಜಿನಪ್ಪ, ತಂದೆ ಗಂಗಪ್ಪ, 1998-99ನೇ ಸಾಲಿನ ಕಾರವಾರ ತಾಲ್ಲೂಕಿನ ಸರಾಯಿ ಗುತ್ತಿಗೆದಾರರ ಕಛೇರಿ, ಕೋಡಿಬಾಗ, ಕಾರವಾರ ತಾಲ್ಲೂಕು.
(ಶ್ರೀ ವಿ.ಎಸ್. ಭಾಗವತ, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಆರೋಪಣಾ ಪಟ್ಟಿಯನ್ನು ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರು ಆರೋಪಿಗಳ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34, 38-ಎ ಮತ್ತು 43-ಎ ರಡಿಯಲ್ಲಿ ಸಲ್ಲಿಸಿ ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ಈ ಪ್ರಕರಣದ ಫಿರ್ಯಾದುದಾರರು ತಮಗೆ ಸಿಕ್ಕಂತಹ ಖಚಿತವಾದ ವರ್ತಮಾನದ ಮೇರೆಗೆ ದಿನಾಂಕ: 23.11.98 ರಂದು ತನ್ನ ಮೇಲಾಧಿಕಾರಿ ಹಾಗೂ ಸಿಬ್ಬಂದಿಗಳೊಂದಿಗೆ ಮತ್ತು ಇಬ್ಬರು ಪಂಚರೊಂದಿಗೆ ಇಲಾಖಾ ವಾಹನದಲ್ಲಿ ಅಂಕೋಲಾ ಕಡೆಗೆ ವಾಹನಗಳ ತಪಾಸಣೆಗಾಗಿ ಹೋಗುತ್ತಿದ್ದಾಗ ರಾತ್ರಿ 9-30 ಗಂಟೆಯ ಸಮಯಕ್ಕೆ ಕಾರವಾರ ತಾಲ್ಲೂಕಿನ ವ್ಯಾಪ್ತಿಗೆ ಬರುವ ಅರ್ಗಾದಲ್ಲಿ ಅಂಕೋಲಾ ಕಡೆಯಿಂದ ಬಂದಂತಹ ಒಂದು ಜೀಪ್ ಸಂ. ಕೆಎ-04/ಎಂ-5976 ನೇದನ್ನು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ಅದನ್ನು ನಿಲ್ಲಿಸದೇ ಮುಂದೆ ಹೋದನೆಂದೂ, ಕೂಡಲೇ ಫಿರ್ಯಾದಿ ಕಡೆಯವರು ತಮ್ಮ ಜೀಪ್‌ನ್ನು ತಿರುಗಿಸಿ ಬೆನ್ನಟ್ಟಿ ಬಂದು ಕಾರವಾರ ಶಹರದ ವ್ಯಾಪ್ತಿಯ ಬೈತ್‌ಖೋಲ್ ಪೋಸ್ಟ್ ಆಫೀಸಿನ ಸಮೀಪದಲ್ಲಿ ಸದರಿ ಜೀಪ್‌ನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಅದರ ಮುಂದುಗಡೆ ವಾಹನ ಚಾಲಕ ಮತ್ತು ಇನ್ನಿಬ್ಬರು ವ್ಯಕ್ತಿಗಳು ಕುಳಿತಿದ್ದು ವಾಹನದ ಹಿಂದುಗಡೆಯಲ್ಲಿ ಟರ್ಪಾಲು ಹಾಕಿ ಯಾವುದೋ ವಸ್ತುವನ್ನು ಮುಚ್ಚಿಟ್ಟಿದ್ದು ಕಂಡುಬಂದು ಅದರಲ್ಲಿ ಏನಿದೆ ಎಂದು ಚಾಲಕನಲ್ಲಿ ವಿಚಾರಿಸಲಾಗಿ ಆತನು ತನ್ನೊಂದಿಗೆ ಇದ್ದ ಒಬ್ಬ ವ್ಯಕ್ತಿಗೆ ಸೇರಿದ ಫೆನ್ನಿಯ ಬಾಟ್ಲಿಗಳಿರುವುದಾಗಿ ತಿಳಿಸಿ ಮತ್ತೊಬ್ಬನು ವಾಹನದ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿರುವುದಾಗಿ ತಿಳಿಸಿದಾಗ, ಆ ವಸ್ತುಗಳಿಗೆ ಸಂಬಂಧಪಟ್ಟವರು ಚಾಲಕನೊಂದಿಗೆ ಕೆಳಗಿಳಿದು ಬಂದು ಟರ್ಪಾಲನ್ನು ಎತ್ತಿ ತೋರಿಸಿದಾಗ ಸದರಿ ಜೀಪಿನಲ್ಲಿ ಒಟ್ಟು 30 ರಟ್ಟಿನ ಪೆಟ್ಟಿಗೆಗಳಿದ್ದು ಅವುಗಳಲ್ಲಿ ಪ್ರತಿಯೊಂದರಲ್ಲಿ 180ಮಿ.ಲೀ.ನ ಸಾಮರ್ಥ್ಯದ 48 ಸೀಸೆಗಳಂತೆ ಓಲ್ಡ್ ಗೋವಾ ಫೆನ್ನಿಯ ಸೀಸೆಗಳಿದ್ದು ಅವುಗಳ ಮೇಲೆ "ಕರಾವಳಿ ಡಿಸ್ಟಿಲರಿ" ಹೇರಂಗಡಿ ಹೊನ್ನಾವರ ಎಂದು ನಮೂದಿಸಲಾಗಿತ್ತೆಂದೂ, ವಾಹನದಲ್ಲಿದ್ದ ಮೂವರು ಆಸಾಮಿಗಳ ಪೈಕಿ ಬಿ.ಎನ್. ಸ್ವಾಮಿ, ಸಾ: ಬೋನಳ್ಳಿ, ಹಾಸನ್ ತಾಲ್ಲೂಕು ಈತನು ಸದರಿ ಫೆನ್ನಿಯ ಸೀಸೆಗಳು ತನಗೆ ಸೇರಿದ್ದಾಗಿ ತಿಳಿಸಿದನೆಂದೂ ಇವುಗಳನ್ನು ಸಾಗಿಸಲು ಅಧಿಕೃತ ದಾಖಲೆಗಳು ಇದೆಯೇ ಎಂದು ಸದರಿಯವರಲ್ಲಿ ವಿಚಾರಿಸಲಾಗಿ ತಮ್ಮಲ್ಲಿ ಯಾವುದೇ ಕಾಗದ ಪತ್ರಗಳು ಇರುವುದಿಲ್ಲವಾಗಿ ತಿಳಿಸಿದ್ದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14ರಂತೆ ಅಪರಾಧವಾಗಿದ್ದು, ಕಲಂ 34, 38-ಎ ಮತ್ತು 43-ಎ ರನ್ವಯ ಶಿಕ್ಷಾರ್ಹವಾಗಿದ್ದರಿಂದ ಮೂವರು ಆರೋಪಿಗಳನ್ನು ದಸ್ತಗೀರ್ ಮಾಡಿ ವಾಹನ ಹಾಗೂ ಫೆನ್ನಿಯ ಸೀಸೆಗಳ ಪೆಟ್ಟಿಗೆಗಳನ್ನು ಜಪ್ತಿ ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡು ಜಪ್ತಾದ ಫೆನ್ನಿಯ ಪೈಕಿ ಒಂದು ಸೀಸೆಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆದುಕೊಳ್ಳಲಾಯಿತೆಂದೂ, ನಂತರ ಕಛೇರಿಗೆ ಬಂದು ತನ್ನ ಫಿರ್ಯಾದನ್ನು ದಾಖಲಿಸಿ, ಗುಪ್ತ ವಾರ್ತಾ ವಿಭಾಗದ ಅಬಕಾರಿ ನಿರೀಕ್ಷಕರ ಗುನ್ನೆ ಸಂ. ಇಎಕ್ಸ್‌ಇ/ಇಐಬಿ/ಐಇ-2/ಎಫ್‌ಐಆರ್ ನಂ.32/98-99, ದಿನಾಂಕ:

23.11.98 ರಂತೆ ಪ್ರಕರಣಕ್ಕೆ ಸಂಬಂಧಿಸಿದ ಪ್ರ.ಮಾ.ವರದಿ ಪಂಚನಾಮೆ ಮತ್ತು ಫಿರ್ಯಾದಿನ ದೃಢೀಕೃತ ನಕಲುಗಳು ಹಾಗೂ ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ.

3. ದಿನಾಂಕ: 26.11.98 ರಂದು ಶ್ರೀ ವಿ.ಎಸ್. ಭಾಗವತ್, ವಕೀಲರು ಕಾರವಾರ ಇವರು ಈ ಪ್ರಾಧಿಕಾರದಲ್ಲಿ ಅರ್ಜಿಯನ್ನು ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ಜಪ್ತಿಯಾಗಿರುವ ವಾಹನವು ಶ್ರೀ ಎಸ್.ಎಚ್. ಲಕ್ಷ್ಮಿ ಕ್ರಾಂತ್, ಸಾ: ಮಲ್ಲೇಶ್ವರಂ, ಬೆಂಗಳೂರು ಇವರ ಮಾಲೀಕತ್ವದ್ದಾಗಿದ್ದು, ಸದರಿ ವಾಹನವನ್ನು ಕಳೆದ 4 ತಿಂಗಳ ಹಿಂದಿನಿಂದ ಶ್ರೀ ಎನ್. ಶಿವಕುಮಾರ್ ಸರಾಯಿ ಗುತ್ತಿಗೆದಾರರು, ಕಾರವಾರ ಇವರಿಗೆ ರೂ.10,500/- ಗಳಿಗೆ ಬಾಡಿಗೆ ವತಿಯಿಂದ ನೀಡಲಾಗಿತ್ತೆಂದೂ ಅದನ್ನು ಸರಾಯಿ ಗುತ್ತಿಗೆದಾರರು ತಮ್ಮ ದಿನನಿತ್ಯದ ಉಸ್ತುವಾರಿಯ ಕೆಲಸಕ್ಕಾಗಿ ಬಳಸಿಕೊಳ್ಳುತ್ತಿದ್ದರೆಂದೂ, ಈ ವಾಹನವನ್ನು ನೀಡುವ ಸಮಯದಲ್ಲಿ ಯಾವುದೇ ಅನಧಿಕೃತ ಕೆಲಸಕ್ಕೆ ಬಳಸಿಕೊಳ್ಳಬಾರದೆಂದು ತಿಳಿಸಲಾಗಿತ್ತೆಂದೂ, ದಿನಾಂಕ: 23.11.1998 ರಂದು ಸದರಿ ವಾಹನದಲ್ಲಿ ಶ್ರೀ ಎನ್. ಶಿವಕುಮಾರ್ ಇರರ ನೌಕರರು ಮತ್ತು ಚಾಲಕನು ಅಮದಳ್ಳಿ ಕಡೆಯಿಂದ ಬರುತ್ತಿದ್ದಾಗ ಅಬಕಾರಿ ಉಪ ಅಧೀಕ್ಷಕರು, ಗುಪ್ತ ವಾರ್ತಾ ವಿಭಾಗ ಕಾರವಾರ ಇವರು ಸದರಿ ವಾಹನದಲ್ಲಿ ಅನಧಿಕೃತವಾಗಿ ಫೆನ್ನಿಯನ್ನು ಸಾಗಿಸುತ್ತಿದ್ದುದ್ದಾಗಿ ಆರೋಪಿಸಿ ಸುಳ್ಳು ಪ್ರಕರಣವನ್ನು ದಾಖಲಿಸಿರುತ್ತಾರೆಂದೂ, ಸದರಿ ದಿನ ಯಾವುದೇ ರೀತಿಯ ಫೆನ್ನಿಯನ್ನು ಈ ವಾಹನದಲ್ಲಿ ಸಾಗಿಸಿರುವುದಿಲ್ಲವೆಂದೂ, ವಾಹನವನ್ನು ತಪಾಸಿಸುವಾಗ ಅರ್ಜಿದಾರ ಹಾಜರಿರಲಿಲ್ಲವೆಂದೂ, ವಾಹನದ ಮಾಲೀಕರು ಕಾರವಾರದಿಂದ 550 ಕಿ.ಮೀ. ದೂರದಲ್ಲಿರುವ ಬೆಂಗಳೂರಿನಲ್ಲಿ ವಾಸಿಸುತ್ತಿರುವುದರಿಂದ ಅವರು ಈ ಪ್ರಕರಣದಲ್ಲಿ ಭಾಗಿಯಾಗುವ ಪಶ್ನೆ ಉದ್ಭವಿಸಿರುವುದಿಲ್ಲವೆಂದೂ, ಈ ವಾಹನವನ್ನು ಜಪ್ತಿ ಮಾಡಿದ ವಿಷಯವು ಅರ್ಜಿದಾರರಿಗೆ ಗುತ್ತಿಗೆದಾರರಿಂದ ತಿಳಿದುಬಂತೆಂದೂ, ಈ ವಾಹನವನ್ನು ವಿಚಾರಣೆಯು ಮುಗಿಯುವವರೆಗೆ ಹಾಗೆಯೇ ಇಟ್ಟಲ್ಲಿ ಹಾಳಾಗಬಹುದಾಗಿರುವುದರಿಂದ ಅದನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿದ್ದರು.

4. ಈ ಪ್ರಾಧಿಕಾರದ ಆದೇಶ ಸಂಖ್ಯೆ. ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/145/1998-99, ದಿನಾಂಕ: 23.12.1998 ರಂತೆ ಈ ವಾಹನಕ್ಕೆ ರೂ. 42,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ಕಾರ್ಪೊರೇಷನ್ ಬ್ಯಾಂಕ್, ಹುಬ್ಬಳ್ಳಿ ಶಾಖೆಯಿಂದ ಪಡೆದು ಕೆಲವು ಷರತ್ತುಗಳನ್ನು ವಿಧಿಸಿ, ಸದರಿ ವಾಹನವನ್ನು ನನ್ನ ಪೂರ್ವಾಧಿಕಾರಿಗಳು ಅರ್ಜಿದಾರರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿ ಆದೇಶಿಸಿರುತ್ತಾರೆ. ಅನಂತರ ಸದರಿ ವಾಹನವನ್ನು ವಿಧಿಸಲಾದ ಷರತ್ತಿನನ್ವಯ ಈ ಪ್ರಾಧಿಕಾರದಲ್ಲಿ ಹಾಜರುಪಡಿಸಲು ಹಲವಾರು ಬಾರಿ ಸೂಚಿಸಲಾದರೂ ಸಹ ವಾಹನವನ್ನು ಹಾಜರುಪಡಿಸದಿದ್ದ ಕಾರಣಕ್ಕಾಗಿ ಪ್ರಾಧಿಕಾರದ ಆದೇಶ ಸಂಖ್ಯೆ: ಡಿಟಿಸಿಆರ್/145/98-99 ದಿನಾಂಕ: 19.4.2000 ರಂತೆ ಭದ್ರತೆಯಾಗಿ ನೀಡಿದ್ದ ರೂ. 42,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದ ಕ್ರಮವನ್ನು ಪ್ರಶ್ನಿಸಿ ಮೇಲ್ಮನವಿ ಸಲ್ಲಿಸಿದನ್ವಯ ಮಾನ್ಯ ಸೆಶನ್ಸ್ ನ್ಯಾಯಾಲಯ, ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ. 47/2000 ದಿನಾಂಕ: 8.8.2003 ರಂತೆ ಅರ್ಜಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ, ಪ್ರಾಧಿಕಾರದ ಆದೇಶವನ್ನು ತಳ್ಳಿಹಾಕಿರುತ್ತಾರೆ. ಅನಂತರವೂ ಸಹ ಅರ್ಜಿದಾರರು ಒಮ್ಮೆಯೂ ವಾಹನವನ್ನು ಹಾಜರುಪಡಿಸಿಲ್ಲ.

5. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 3.6.1999 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿಯ ಮದ್ಯಸಾರದ ಅಂಶವು $41.5^{\circ}$ ಯು.ಪಿ.ಯಷ್ಟು ಇದ್ದು, ಇದು ಮಾನವ ಸೇವನೆಗೆ ಯೋಗ್ಯವಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

6. ಅದೇ ರೀತಿ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/145/1998-99, ದಿನಾಂಕ: 25.2.1999 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಫೆನ್ನಿಯ ಸೀಸೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಸಹ ನನ್ನ ಪೂರ್ವಾಧಿಕಾರಿಯಿಂದ ಆದೇಶವಾಗಿರುತ್ತದೆ.

7. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 34 ಮತ್ತು 38-ಎ ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯು 1 ರಿಂದ 2ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ. 1 ರಿಂದ 5 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಾದ ಯಶವಂತ ಗುಣಾ ನಾಯ್ಕ ಇವರಿಗೆ ಕಣ್ಣುಗಳು ಕಾಣಿಸದೇ ಶಸ್ತ್ರಚಿಕಿತ್ಸೆಗೊಳಗಾಗಿರುವ ಬಗ್ಗೆ ವರದಿಯಾಗಿದ್ದರಿಂದ ಸದರಿಯವರ ವಿಚಾರಣೆಯನ್ನು ಕೈಬಿಡಲಾಗಿದೆ. ಅದೇ ರೀತಿ ರವಿ ತಂದೆ ರಾಜೇಶ ಬಾನಾವಳಿ ಇವರು ದಿನಾಂಕ: 30.8.2004 ರಂದು ಮೃತರಾಗಿರುವ ಬಗ್ಗೆ ದಾಖಲೆ ಸಲ್ಲಿಸಿದ್ದರಿಂದ ಸದರಿಯವರ ಸಾಕ್ಷ್ಯವನ್ನು ಸಹ ಕೈಬಿಡಬೇಕಾಯಿತು.

8. ಪಿ.ಡಬ್ಲ್ಯು-1 ಮತ್ತು 2 ನೇಯವರ ಹೇಳಿಕೆಗಳು ಹಾಗೂ ಅಭಿಯೋಜನೆಪರ ಸಲ್ಲಿಸಲಾಗಿದ್ದ ಲಿಖಿತ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯು 1 ರಂತೆ ಪಡೆದುಕೊಳ್ಳಲಾಯಿತು.

9. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ವಿ.ಎಸ್. ಭಾಗವತ್, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**ವಿವಾದಾಂಶಗಳು:**

1. ಕಾರವಾರ ತಾಲ್ಲೂಕಿನ ಬೈತ್‌ಖೋಲ್ ಅಂಚೆ ಕಚೇರಿ ಹತ್ತಿರ ರಾಷ್ಟ್ರೀಯ ಹೆದ್ದಾರಿಯ ಮೇಲೆ ಅಂಕೋಲಾ ಕಡೆಯಿಂದ ಬರುತ್ತಿದ್ದಂತಹ ಜೀಪ್ ಸಂ. ಕೆಎ-04/ಎಂ-5976 ನೇದರಲ್ಲಿ ಪ್ರತಿಯೊಂದರಲ್ಲಿ 180 ಮಿ.ಲೀ.ನ ತಲಾ 48 ಸೀಸೆಗಳಂತೆ ಒಟ್ಟು 30 ಪೆಟ್ಟಿಗೆಗಳಲ್ಲಿ ಓಲ್ಡ್ ಗೋವಾ ಎಂಬ ಕೋಕೋನಟ್ ಫೆನ್ನಿಯ ಸೀಸೆಗಳನ್ನು ಆರೋಪಿಗಳನ್ನು ಅನಧಿಕೃತವಾಗಿ ಸಾಗಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ಮತ್ತು 38-ಎ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಮಾಡಿದ್ದಾರೆಂದು ಅಭಿಯೋಜನೆಯವರು ನಿಸ್ಸಂಶಯವಾಗಿ ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೊ ಅವರಿಗೆ ಅಥವಾ ಆ ವಾಹನ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

12. ಅಂಶ 1:- ಸಕಾರಾತ್ಮಕವಾಗಿ
ಅಂಶ 2:- ನಕಾರಾತ್ಮಕವಾಗಿ
ಅಂಶ 3:- ಸಕಾರಾತ್ಮಕವಾಗಿ

**ಕಾರಣಗಳು**

2. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಉಮಾಕಾಂತ್ ಕೀರಾ ನಾಯ್ಕ, ಅಬಕಾರಿ ನಿರೀಕ್ಷಕ ರವರು ಈ ಪ್ರಾಧಿಕಾರದಲ್ಲಿ ದಿನಾಂಕ: 14.7.1999 ರಂದು ಹಾಜರಾಗಿ ತನ್ನ ಸಾಕ್ಷಿಯಲ್ಲಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದಾಗ ತಯಾರಿಸಲಾದಂತಹ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟಿ ಸವಾಲಿನಲ್ಲಿ, ತಮ್ಮ ಕಛೇರಿಯು ಕಾರವಾರದ ಅರ್ಜುನ್ ಟಾಕೀಸಿನ ಎದುರು ಕೋಡಿಬಾಗದಲ್ಲಿ ಇರುತ್ತದೆಯೆಂದೂ ಅಬಕಾರಿ ವಲಯ ಕಛೇರಿಯು ಸಹ ತಮ್ಮ ಕಛೇರಿಯ ಬಳಿ ಇದೆಯೆಂದೂ, ತನ್ನ ಅಧಿಕಾರ ವ್ಯಾಪ್ತಿ ಜಿಲ್ಲೆಯಾದ್ಯಂತ ಇರುತ್ತದೆಯೆಂದೂ, ತನ್ನ ಉಪ ಅಧೀಕ್ಷಕರ ಹೆಸರು ಎಸ್.ಟಿ. ಗೌಡರ ಆಗಿರುತ್ತದೆಯೆಂದೂ, ಕರಾವಳಿ ಡಿಸ್ಟಿಲರಿಯು ಅಧಿಕೃತ ಲೈಸನ್ಸ್ ಪಡೆದ ಡಿಸ್ಟಿಲರಿಯಾಗಿರುತ್ತದೆಯೆಂದೂ, ಕರಾವಳಿ ಡಿಸ್ಟಿಲರಿಯವರಿಗೆ ಫೆನ್ನಿ ತಯಾರಿಸಲು ಲೈಸನ್ಸ್ ನೀಡಲಾಗಿರುತ್ತದೆಯೆಂದೂ, ಈ ಡಿಸ್ಟಿಲರಿಯಲ್ಲಿ ಮೇಲ್ವಿಚಾರಣೆ ಮಾಡಲು ಅಬಕಾರಿ ಸಿಬ್ಬಂದಿಗಳನ್ನು ನೇಮಿಸಲಾಗಿರುತ್ತದೆಯೆಂದೂ, ಜಪ್ತಿ ಮಾಡಿದ ಜೀಪಿನಲ್ಲಿಯೇ ಅಕ್ರಮವಾಗಿ ಫೆನ್ನಿ ಸಾಗಾಣಿಕೆಯಾಗುತ್ತಿದೆ ಎನ್ನುವ ಬಗ್ಗೆ ಖಚಿತವಾದ ವರ್ತಮಾನ ಇತ್ತೆಂದೂ, ತನ್ನ ಕಛೇರಿಯ ಡೈರಿಯಲ್ಲಿ ಇದೇ ಬಾತ್ಮಿ ಇದ್ದ ಬಗ್ಗೆ ನಮೂದಿಸಿಲ್ಲವೆಂದೂ, ಪಂಚರನ್ನು ತನ್ನ ಕಛೇರಿಯ ಸಮೀಪದಲ್ಲಿದ್ದವರನ್ನು ಕರೆದುಕೊಂಡು ಹೋದೆನೆಂದೂ, ಸುಮಾರು 6 ಗಂಟೆಯಿಂದ 9 ಗಂಟೆಯವರೆಗೆ ಅರ್ಗಾದಲ್ಲಿ ಕಾಯುತ್ತಿದ್ದೆವೆಂದೂ, ಸದರಿ ಜೀಪನ್ನು ಬಿಟ್ಟು ಬೇರೆ ಯಾವುದೇ ವಾಹನವನ್ನು ತಪಾಸಿಸಲಿಲ್ಲವೆಂದೂ, ವಾಹನದ ಮಾಲೀಕರು ಯಾರೆಂದು ತಿಳಿದುಬರಲಿಲ್ಲವೆಂದೂ, ಅರ್ಗಾದಿಂದ ಬೈತ್‌ಖೋಲ್ ಸುಮಾರು 6 ಕಿ.ಮೀ. ನಷ್ಟು ಆಗುತ್ತದೆಯೆಂದೂ, ತಾನು ಮತು ತನ್ನ ಮೇಲಾಧಿಕಾರಿಗಳು ಸಮವಸ್ತ್ರದಲ್ಲಿ ಇದ್ದವೆಂದೂ, ತಾವು ತಮ್ಮ ಜೀಪಿನ ಹಿಂಭಾಗದಲ್ಲಿ ನಿಂತುಕೊಂಡಿದ್ದೆವೆಂದೂ, ತಮ್ಮ ಜೀಪಿನ ಹಿಂದುಗಡೆ ಅವರ ಜೀಪು ಇತ್ತೆಂದು, ಗಾಡಿ ನಿಲ್ಲಿಸಿದ ನಂತರ ಅವರು ಓಡಿ ಹೋಗಲು ಪ್ರಯತ್ನಿಸಲಿಲ್ಲವೆಂದೂ, ಬಿ.ಎಲ್. ಸ್ವಾಮಿಯ ಲಿಖಿತ ಹೇಳಿಕೆಯನ್ನು ತಾನು ತೆಗೆದುಕೊಂಡಿಲ್ಲವೆಂದೂ ಈ ವಾಹನದಲ್ಲಿ ಸರಾಯಿ ಗುತ್ತಿಗೆದಾರನು ಸರಾಯಿ ಸರಬರಾಜು ಮಾಡುತ್ತಿದ್ದ ಎನ್ನುವುದು ತನಗೆ ತಿಳಿದಿಲ್ಲವೆಂದೂ, ಸರಾಯಿ ಗುತ್ತಿಗೆ ಹಿಡಿದ ವ್ಯಕ್ತಿಗೆ ಇಡೀ ತಾಲ್ಲೂಕಿನಲ್ಲಿ ಸರಾಯಿ ಅಂಗಡಿ ಇರುತ್ತವೆಂದೂ, ಅರ್ಗಾದಿಂದ ಅಮದಳ್ಳಿ ಸುಮಾರು 8 ಕಿ.ಮೀ. ಆಗುತ್ತದೆಯೆಂದೂ, ಆ ಸಮಯದಲ್ಲಿ ಯಾರು ಗುತ್ತಿಗೆದಾರರಾಗಿದ್ದರು ಎನ್ನುವ ಬಗ್ಗೆ ತನಗೆ ನೆನಪಿಲ್ಲವೆಂದೂ, ಆ ದಿನ ಜಪ್ತಿ ಮಾಡಿದ ವಾಹನವು ಕಾರವಾರದ ಸರಾಯಿ ಗುತ್ತಿಗೆದಾರರಿಗೆ ಸೇರಿದ್ದು ಎನ್ನುವುದು ತನಗೆ ಗೊತ್ತಿಲ್ಲವೆಂದೂ, ಕಾರವಾರದ ಗುತ್ತಿಗೆದಾರರಿಗೂ ಮತ್ತು ಅವರ ಸ್ವಯಂ ಸೇವಕರಿಗೂ ಸೇರಿರುವುದು ಎನ್ನುವುದು ಸರಿಯಲ್ಲವೆಂದೂ, ಪ್ರಕರಣದ ಬಗ್ಗೆ ತಾನು ಮುಂದಿನ ತನಿಖೆ ಮಾಡಿರುವುದಿಲ್ಲವೆಂದೂ, ಸರಾಯಿ ಗುತ್ತಿಗೆದಾರರು ಮೇಲಿಂದ ಮೇಲೆ ಅಬಕಾರಿ ದಾಳಿ ನಡೆಸಬೇಕು ಎಂದು ಒತ್ತಾಯ ಪಡಿಸುತ್ತಿದ್ದರೆನ್ನುವುದು ಸರಿಯಲ್ಲವೆಂದೂ, ವಾಹನದಲ್ಲಿದ್ದ ಸರಾಯಿ ಗುತ್ತಿಗೆದಾರರಿಗೂ ಮತ್ತು ತನ್ನ ಮೇಲಾಧಿಕಾರಿಗಳಿಗೂ ಮನಸ್ತಾಪವಾಗಿತ್ತು ಎನ್ನುವುದು ಸರಿಯಲ್ಲವೆಂದೂ, ನುಡಿದಿರುತ್ತಾರೆ.

13. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಈ ಪ್ರಕರಣದಲ್ಲಿ ಜಪ್ತಿಯಾದಂತಹ ಫೆನ್ನಿಯ ಡಿಸ್ಟಿಲರಿಯಲ್ಲಿ ಅಬಕಾರಿ ಸಿಬ್ಬಂದಿಗಳು ಮೇಲ್ವಿಚಾರಣೆಗಾಗಿ ಇದ್ದರೂ ಸಹ ಅವರು ಕಛೇರಿಯ ವೇಳೆಯಲ್ಲಿ ಮಾತ್ರ ಡಿಸ್ಟಿಲರಿಯ ಕಾರ್ಯನಿರ್ವಹಿಸುತ್ತಾರೆ. ಅನಂತರದ ಸಂದರ್ಭದಲ್ಲಿ ಡಿಸ್ಟಿಲರಿಯ ಒಡೆಯನು ಅಧಿಕಾರಿಗಳ ಕಣ್‌ತಪ್ಪಿಸಿ ಯಾವುದೇ ರೀತಿಯ ಅಕ್ರಮ ವ್ಯವಹಾರಗಳನ್ನು ಡಿಸ್ಟಿಲರಿಯಲ್ಲಿ ನಡೆಸುವ ಸಾಧ್ಯತೆಗಳಿವೆ. ಈ ರೀತಿಯ ಅನೇಕ ಅಕ್ರಮ ಮದ್ಯದ ಪ್ರಕರಣಗಳು ಈ ಸಮಯದಲ್ಲಿ ಜಪ್ತಿಯಾಗಿ ಗುನ್ನೆ ದಾಖಲಾದ ಉದಾಹರಣೆಗಳು ಸಾಕಷ್ಟಿವೆ. ಕಛೇರಿಯ ಡೈರಿಯನ್ನು ಆಯಾ ದಿನದ ಕರ್ತವ್ಯ ಮಗಿದ ನಂತರ ಅಧಿಕಾರಿಗಳು ಬರೆಯುವುದರಿಂದ ಅದರಲ್ಲಿ ಅಕ್ರಮ ಸಾಗಾಣಿಕೆಯ ಕೃತ್ಯ ನಡೆದು ಗುನ್ನೆ ದಾಖಲಾದ ಬಗ್ಗೆ ನಮೂದಿಸಲಾಗುವುದರಿಂದ ಬಂದಂತಹ ಖಚಿತ ವರ್ತಮಾನದ ಬಗ್ಗೆ ಬರೆಯುವ ಅವಶ್ಯಕತೆ ಇರುವುದಿಲ್ಲ. ಪಂಚರು ಫಿರ್ಯಾದಿಯ ಕಛೇರಿಯ ಸಮೀಪ ವಾಸಿಸುವವರಾದರೂ ಅವರುಗಳು ಸ್ವತಂತ್ರ ಪಂಚರಾಗಿರುತ್ತಾರೆ. ಖಚಿತವಾದ ವರ್ತಮಾನವಿದ್ದುದರಿಂದ ಬೇರೆ ವಾಹನಗಳನ್ನು ತಪಾಸಿಸದೆ ನೇರವಾಗಿ ಇದೇ ವಾಹನವನ್ನು ತಪಾಸಿಸಿರುವುದು ಸಮಂಜಸವಾಗಿದೆ. ವಾಹನದ ಜಪ್ತಿಯ ಕಾಲಕ್ಕೆ ಚಾಲಕನಲ್ಲಿ ಯಾವುದೇ ದಾಖಲೆಗಳು ಸಿಗಲಿಲ್ಲವಾಗಿ ಪಂಚನಾಮೆಯಲ್ಲಿ ತಿಳಿಸಿರುವುದರಿಂದ ವಾಹನದ ಮಾಲೀಕರು ಯಾರೆಂಬುದು ತಿಳಿದಿರಕ್ಕಿಲ್ಲ. ಪಿ.ಡಬ್ಲ್ಯೂ-1 ರವರು ಸದರಿ ವಾಹನವನ್ನು ಅರ್ಗಾದಿಂದ ಬೈತಕೋಲ್ ವರೆಗೆ ಬೆನ್ನಟ್ಟಿ ಹಿಡಿದಿರುವುದರಿಂದ ಪುನಃ ಆರೋಪಿಗಳು ಓಡಲು ಪ್ರಯತ್ನಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಈ ವಾಹನವನ್ನು ಸರಾಯಿ ಗುತ್ತಿಗೆದಾರರು ಬಾಡಿಗೆಗಾಗಿ ಪಡೆದಿರಲಿ ಅಥವಾ ಪಡೆಯದಿರಲಿ, ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆ ಆಗಿರುವುದಂತೂ ಖಚಿತವಾಗಿದೆ. ಅಲ್ಲದೇ ಈ ವಾಹನದಲ್ಲಿ 98-99ನೇ ಸಾಲಿನಲ್ಲಿ ಸರಾಯಿ ಗುತ್ತಿಗೆ ಪಡೆದಿರುವ ಗುತ್ತಿಗೆದಾರನಾಗಲೀ ಅಥವಾ ಆತನ ನೌಕರನಾಗಲೀ ಇದ್ದರು ಎನ್ನುವ ಬಗ್ಗೆ ಯಾವುದೇ ದಾಖಲೆ ಇರುವುದಿಲ್ಲ. ಅಬಕಾರಿ ಗುತ್ತಿಗೆದಾರರು ಮೇಲಿಂದ ಮೇಲೆ ದಾಳಿ ನಡೆಸಬೇಕೆಂದು ಹೇಳುವುದಕ್ಕೂ ಮತ್ತು ಈ ಪ್ರಕರಣಕ್ಕೂ ಸಂಬಂಧ ಹೊರಿಸುವುದಾದಲ್ಲಿ ಈ ವಾಹನದಲ್ಲಿದ್ದ 30 ಪೆಟ್ಟಿಗೆ ಫೆನ್ನಿಯನ್ನು ಫಿರ್ಯಾದಿ ಕಡೆಯವರು ಎಲ್ಲಿಂದ ತಂದು ಸೇರಿಸಿದರು ಎನ್ನುವ ಬಗ್ಗೆ ಎದುರುದಾರರು ವಿವರಿಸಿಲ್ಲ. ಗುತ್ತಿಗೆದಾರರ ಮೇಲಿನ ಸೇಡಿನಿಂದ ಈ ಗುನ್ನೆಯನ್ನು ದಾಖಲಿಸಿದ್ದಲ್ಲಿ ವಾಹನದ ಮಾಲೀಕರು ಸರಾಯಿ ಗುತ್ತಿಗೆದಾರರಿಗೆ ವಾಹನವನ್ನು ಬಾಡಿಗೆಯ ನಾತೆಯಿಂದ ನೀಡಿರುವ ಬಗೆ ಯಾವುದೇ ರೀತಿಯ ಕರಾರು ಪತ್ರವನ್ನು ಸಲ್ಲಿಸಿಲ್ಲ. ಹೀಗಾಗಿ ಈ ವಾಹನವನ್ನು ಸರಾಯಿ ಗುತ್ತಿಗೆದಾರರಿಗೆ ಬಾಡಿಗೆಗೆ ನೀಡಲಾಗಿತ್ತು ಎನ್ನುವ ಬಗ್ಗೆ ಯಾವುದೇ ಆಧಾರವಿರುವುದಿಲ್ಲ. ಒಂದು ವೇಳೆ ಗುತ್ತಿಗೆದಾರರ ಮೇಲೆ ಫಿರ್ಯಾದಿ ಕಡೆಯವರಿಗೆ ದ್ವೇಷವಿದ್ದಲ್ಲಿ ನೇರವಾಗಿ ಗುತ್ತಿಗೆದಾರ ಅಥವಾ ಅವರ ನೌಕರನ ಮೇಲೆ ಆರೋಪವನ್ನು ಹೊರಿಸಬಹುದಾಗಿತ್ತೇ ಹೊರತು ಈ ವಾಹನದ ಮಾಲೀಕರ ಮೇಲೆ ಏಕೆ ಸುಳ್ಳು ಆರೋಪವನ್ನು ಹೊರಿಸುವುದಕ್ಕಾಗಿ ಸುಳ್ಳು ಪ್ರಕರಣ ದಾಖಲಿಸಿದರು ಎನ್ನುವ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿಲ್ಲ.

14. ಈ ಪ್ರಕರಣದ ತನಿಖಾಧಿಕಾರಿಗಳಾದ ಎಸ್.ಎಸ್. ಖತೀಬ, ಅ.ನಿ. ಇವರು ದಿನಾಂಕ: 14.7.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಐ.ಡಿ.ಪಿ.ಯವರ ಮುಖ್ಯ ವಿಚಾರಣೆಯಲ್ಲಿ ದಿನಾಂಕ: 8.3.1999 ರಲ್ಲಿ ತಾನು ಈ ಪ್ರಕರಣದ ಕಡತವನ್ನು ಅಬಕಾರಿ ನಿರೀಕ್ಷಕರು ಗು.ವಾ.ಎ, ಕಾರವಾರ ರವರಿಂದ ಪಡೆದುಕೊಂಡು ಪರಿಶೀಲಿಸಿದ್ದೇನೆಂದೂ, ಅದು ಕ್ರಮಬದ್ಧವಾಗಿದ್ದು, ದಿನಾಂಕ: 25.5.1999 ರಂದು ಸ್ಯಾಂಪಲ್ ಬಾಟ್ಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತಜ್ಞರ ಬಳಿ ಕಳುಹಿಸಿದೆನೆಂದೂ, ದಿನಾಂಕ: 3.6.1999 ರಂದು ವಿಶ್ಲೇಷಣಾ

ವರದಿಯನ್ನು ಪಡೆದುಕೊಂಡು ಪ್ರಕರಣಕ್ಕೆ ಅಳವಡಿಸಿಕೊಂಡೆನೆಂದೂ, ನಂತರ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ಅದರ ಸಿ.ಸಿ. ನಂ. 166/2000 ಆಗಿರುತ್ತದೆಂದು ನುಡಿಯುತ್ತಾ, ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಗುರ್ತಿಸಿಕೊಂಡಿರುತ್ತಾರೆ. ನಂತರ ಎದುರುದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ಸಾಕ್ಷಿ-ಪುರಾವೆಗಳು ಇಲ್ಲದಿದ್ದರೂ ಸಹ ಸುಳ್ಳು ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದಾರೆಂಬುದು ಸರಿಯಲ್ಲವೆಂದೂ, ಜಪ್ತಿಯಾದ ಮುದ್ದೆಮಾಲಿಗೂ ಮತ್ತು ಆರೋಪಿತರಿಗೂ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**15. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಈ ಪ್ರಕರಣದ ತನಿಖಾಕಾರಿಗಳು ತಾನು ಕಡತವನ್ನು ಗುನ್ನೆಯ ಅನ್ವೇಷಣಾಧಿಕಾರಿಯಿಂದ ಪಡೆದುಕೊಂಡ ಬಗ್ಗೆ ಹಾಗೂ ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿದ ಬಗ್ಗೆ ಮತ್ತು ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ ಬಗ್ಗೆ ಹಾಗೂ ಜಪ್ತಿಯಾದ ಮುದ್ದೆ ಮಾಲಿಗೂ ಮತ್ತು ಆರೋಪಿತನಿಗೂ ಯಾವುದೇ ಸಂಬಂಧವಿಲ್ಲ ಎನ್ನುವುದನ್ನು ನಿರಾಕರಿಸಿ, ಆರೋಪಿತರ ಮೇಲೆ ಸುಳ್ಳು ದೋಷಾರೋಪಣಾ ಪಟ್ಟಿ ಸಲ್ಲಿಸಿರುವುದನ್ನು ಸಹ ಅಲ್ಲಗಳೆದಿರುವುದರಿಂದ ಘಟನೆ ಸಂಭವಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಾಧಿಕಾರದಲ್ಲಿ ನಿಸ್ಸಂಶಯವಾಗಿ ಸಾಬೀತುಪಡಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

16. ದಿನಾಂಕ: 20.10.2004 ರಂದು ಅರ್ಜಿದಾರರ ಪರ ಜಿ.ಪಿ.ಎ. ಧಾರಕರಾದ ಅಂಜಿನಪ್ಪಾ ತಂದೆ ಗಂಗಪ್ಪಾ ಇವರು ಈ ಪ್ರಾಧಿಕಾರದಲ್ಲಿ ಅರ್ಜಿಯನ್ನು ಸಲ್ಲಿಸಿ, 1998-99 ರಲ್ಲಿ ಎನ್. ಶಿವಕುಮಾರ ಎನ್ನುವವರು ಕಾರವಾರ ತಾಲ್ಲೂಕಿನ ಸರಾಯಿ ಗುತ್ತಿಗೆಯನ್ನು ನಡೆಸುತ್ತಿದ್ದರೆಂದೂ, ತಾನು ಇವರಲ್ಲಿ ಮ್ಯಾನೇಜರ್ ಅಂತಾ ಕೆಲಸ ಮಾಡುತ್ತಿದ್ದೆನೆಂದೂ, ಎಸ್.ಎಚ್. ಲಕ್ಷ್ಮಿಕ್ರಾಂತ ಎಂಬುವವರಿಂದ ಜೀಪ್ ಸಂಖ್ಯೆ. ಕೆಎ-04/ಎಂ-5976 ನ್ನು ಕಾರವಾರ ತಾಲ್ಲೂಕಿನ ಎಕ್ಸೈಜ್ ಕಾಂಟ್ರಾಕ್ಟರ್‌ವರೆಗೆ ಬಾಡಿಗೆಗಾಗಿ ನೀಡಿದ್ದೆವೆಂದೂ, ಅವರು ತಮಗೆ ಪವರ್ ಆಫ್ ಅಟಾರ್ನಿ ನೀಡಿರುತ್ತಾರೆಂದೂ, ದಿನಾಂಕ: 23.11.1998 ರಂದು ತಾನು ಅಮದಳ್ಳಿಯಿಂದ ಬರುವಾಗ ಸದರಿ ಜೀಪಿನಲ್ಲಿ ಬೇಕಾಯ್ದೆಶೀರ್ ತರುತ್ತಿದ್ದೆವೆಂದು ಎನ್ನುವುದು ಸರಿಯಲ್ಲವೆಂದೂ, ಒಂದು ವರ್ಷದ ಕಾಂಟ್ರಾಕ್ಟ್‌ನಲ್ಲಿ ತಾವು ಏನೂ ಬೇಕಾಯ್ದೆಶೀರ್ ವ್ಯವಹಾರ ಮಾಡಿರುವುದಿಲ್ಲವೆಂದೂ, ಇ.ಐ.ಬಿ. ಯವರು ತಮ್ಮ ಮೇಲೆ ಕಾರವಾರ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಕಳ್ಳ ಸಾಗಾಣಿಕೆಯ ಬಗ್ಗೆ ಕೇಸ್ ಹಾಕಿದ್ದರೆಂದೂ, ಅದರಲ್ಲಿ ಲಕ್ಷ್ಮೀಕಾಂತ ಕೂಡಾ ಒಬ್ಬ ಆರೋಪಿಯಾಗಿದ್ದನೆಂದೂ, ದಿನಾಂಕ: 27.4.2001 ರಂದು ಮಾನ್ಯ ನ್ಯಾಯಾಲಯ ತೀರ್ಪು ನೀಡಿ ಆರೋಪಿಗಳನ್ನು ಬಿಡುಗಡೆ ಮಾಡಿರುತ್ತಾರೆಂದೂ, ಅದರ ದೃಢೀಕೃತ ನಕಲನ್ನು ಈಗ ತಾನು ಹಾಜರುಪಡಿಸಿದ್ದೆನೆಂದೂ, ಕಾರಣ ತನ್ನ ವಾಹನವನ್ನು ಶಾಶ್ವತವಾಗಿ ಬಿಡುಗಡೆ ಮಾಡಬೇಕೆಂದು ವಿನಂತಿಸಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ.ಯವರ ಪಾಟೀ ಸವಾಲಿನಲ್ಲಿ ತಮ್ಮ ವಾಹನದಲ್ಲಿ ವಾಹನ ಸಂಖ್ಯೆ. ಕೆಎ-04/ಎಂ-5976 ರಲ್ಲಿ ಅಕ್ರಮವಾಗಿ ಸರಾಯಿ ಸಾಗಾಟ ಮಾಡಿದ ಬಗ್ಗೆ ಪ್ರಕರಣ ದಾಖಲಾಗಿರುತ್ತದೆಂದೂ, ಅದೇ ಪ್ರಕಾರ ಅಬಕಾರಿ ಅಧಿಕಾರಿಯವರು ಈ ಬಗ್ಗೆ ಸಂಪೂರ್ಣ ತನಿಖೆ ನಡೆಸಿ, ವಾಹನದಲ್ಲಿ ಸರಾಯಿ ಸಾಗಾಟ ಮಾಡಿದ ಬಗ್ಗೆ ಸಾಕ್ಷಿ ಪುರಾವೆ ಆಗಿರುವುದರಿಂದ ನ್ಯಾಯಾಲಯಕ್ಕೆ ಆರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆಂದೂ, ವಾಹನವನ್ನು ಅಬಕಾರಿ ಅಧಿಕಾರಿಗಳು ಜಪ್ತಿ ಮಾಡಿದ್ದಾರೆ ಅನ್ನುವುದು ಸರಿ ಎಂದೂ, ಅಬಕಾರಿ ಅಧಿಕಾರಿಗಳಿಗೆ ತನ್ನ ಮೇಲೆ ದ್ವೇಷ ಇಲ್ಲವೆನ್ನುವುದು ಸರಿ ಎಂದೂ, ನಂತರ ಪುನಃ ಹೇಳುತ್ತಾ ಅಬಕಾರಿ ಅಧಿಕಾರಿಗಳಿಗೆ ದ್ವೇಷ ಇದೆ ಅಂತಾ ಹೇಳುವುದು ಸರಿ ಎಂದೂ, ಮುಖ್ಯ ವಿಚಾರಣೆಯಲ್ಲಿ ಅಬಕಾರಿ ಅಧಿಕಾರಿಗಳು ತನ್ನ ಮೇಲೆ ದ್ವೇಷದಿಂದ ಸುಳ್ಳು ಕೇಸು ಹಾಕಿದ್ದಾರೆ ಎನ್ನುವ ಬಗ್ಗೆ ತಾನು ಹೇಳಿರುವುದಿಲ್ಲವೆಂದೂ, ಸದರಿ ದಿವಸ ಸರ್ಕಾರಿ ಸರಾಯಿ ಸ್ಯಾಚೆಟ್‌ಗಳನ್ನು ಸಾಗಿಸುತ್ತಿದ್ದಾಗ ವಾಹನವನ್ನು ಹಿಡಿದು ಜಪ್ತಿ ಮಾಡಿರುತ್ತಾರೆಂದೂ, ಸರ್ಕಾರಿ ಸರಾಯಿ ಕರ್ನಾಟಕ ರಾಜ್ಯದಲ್ಲಿ ತಯಾರಾದ ಸರಾಯಿ, ಈ ಪ್ರಕರಣದಲ್ಲಿ ಜಪ್ತಿ ಮಾಡಿದ ಮದ್ಯದ ಸೀಸೆಗಳು ಸೆಕೆಂಡ್ಸ್ ಮದ್ಯದ ಸೀಸೆಗಳಾಗಿರುತ್ತವೆ ಎನ್ನುವುದು ಸರಿ ಎಂದೂ, ಸದರಿ ವಾಹನದಲ್ಲಿ ಅಕ್ರಮ ಸರಾಯಿ ಸಾಗಾಟ ಮಾಡಲಾಗುತ್ತಿತ್ತು ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**17. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಅರ್ಜಿದಾರರು ಸರಾಯಿ ಗುತ್ತಿಗೆದಾರರ ಕಡೆಗೆ ಕೆಲಸಕ್ಕಿದ್ದರು ಎನ್ನುವ ಬಗ್ಗೆ ಯಾವುದೇ ದಾಖಲೆಗಳಿಲ್ಲ. ಸರಾಯಿ ಗುತ್ತಿಗೆದಾರರ ನೌಕರರಿಗೆ ಇಲಾಖೆಯಿಂದ ನೌಕರನಾಮಾವನ್ನು ನೀಡಲಾಗುತ್ತದೆ. ಅದನ್ನು ಇವರು ಹಾಜರುಪಡಿಸಿಲ್ಲ. ವಾಹನದ ಮಾಲೀಕರಿಗೂ ಸರಾಯಿ ಗುತ್ತಿಗೆದಾರರಿಗೂ ಯಾವುದೇ ಸಂಬಂಧವಿರದಿದ್ದಲ್ಲಿ ಗುತ್ತಿಗೆದಾರರ ಕಡೆಗೆ ಕೆಲಸಕ್ಕಿದ್ದ ಅರ್ಜಿದಾರರಿಗೆ ವಾಹನದ ಮಾಲೀಕರು ತನ್ನ ಜಿ.ಪಿ.ಎ. ಯನ್ನು ಏಕೆ ನೀಡಿದರು ಎಂಬುದು ಸಂಶಯಕ್ಕೆಡೆ ಮಾಡಿಕೊಡುತ್ತದೆ. ಸರಾಯಿ ಗುತ್ತಿಗೆದಾರರಿಗೆ ವಾಹನದ ಮಾಲೀಕರು ಸದರಿ ವಾಹನವನ್ನು ಬಾಡಿಗೆಗೆ ನೀಡಿದ್ದರು ಎನ್ನುವ ಬಗ್ಗೆಯಾಗಲೀ ಅಥವಾ ಈ ವಾಹನವನ್ನು ಬಾಡಿಗೆಗೆ ನೀಡುವಾಗ ಅದನ್ನು ಯಾವುದೇ ರೀತಿಯ ಅಕ್ರಮ ವಸ್ತುಗಳ ಸಾಗಾಣಿಕೆಗೆ ಬಳಸಬಾರದಾಗಿ ಯಾವುದಾದರೂ ಕರಾರು ಪತ್ರವನ್ನು ಮಾಡಿಕೊಂಡಿದ್ದಲ್ಲಿ ಅದನ್ನು ಹಾಜರುಪಡಿಸಿಲ್ಲ. ಹೀಗಾಗಿ ವಾಹನದ ಮಾಲೀಕರು ತನ್ನ ವಾಹನವನ್ನು ಇನ್ನೊಬ್ಬರಿಗೆ ಬಾಡಿಗೆಗೆ ನೀಡಿದ್ದೇ ಆದಲ್ಲಿ ಅದನ್ನು ನೀಡುವಾಗ ಯಾವುದೇ ರೀತಿಯ ಮುಂಜಾಗ್ರತಾ ಕ್ರಮವನ್ನು ಕೈಕೊಳ್ಳದೆ ನಿರ್ಲಕ್ಷತನದಿಂದ ಬಾಡಿಗೆಗೆ ನೀಡಿದ್ದು ಕಂಡುಬರುತ್ತದೆ. ಮತ್ತು ಈ ರೀತಿ ವಾಹನವನ್ನು ಬೇರೊಬ್ಬರಿಗೆ ನಡೆಸಲು ನೀಡಿದಾಗ ಅವರು ನಡೆಸಿದ ಅಕ್ರಮ ವ್ಯವಹಾರಕ್ಕಾಗಿ ವಾಹನದ ಮಾಲೀಕನು ಪರಾನುಭವದ ಮೂಲಕ ಮುಟ್ಟುಗೋಲಿನಂತಹ ಕ್ರಮದ ಘೋರ ಪರಿಣಾಮಕ್ಕೆ ಒಳಗಾಗಬೇಕಾಗುತ್ತದೆ. ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಜನ್ ಪಿಟೀಷನ್ ನಂ.338 ಆಫ್ 2000 ದಿನಾಂಕ: 1.10.2002 (ಅಬಕಾರಿ ನಿರೀಕ್ಷಕರು ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಇತರರು ವಿರುದ್ಧ ಪಿ. ವೆಂಕಟರಮಣ) ರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

"A close reading of conditions would imply that the person incharge of the vehicle if he were to misuse the vehicle for illegal transportation directly by himself or allowing others conciously, the owner becomes vicariously liable for the acts and he has to suffer the grave consequences of confiscation The said excuse is not a ground to exonerate from the consequence of confiscation under section 43A(2) of the Act Confiscation.

18. ಅಮದಳ್ಳಿಯಿಂದ ಸದರಿ ಜೀಪಿನಲ್ಲಿ ಅಕ್ರಮ ಮದ್ಯವನ್ನು ತಾವು ತರುತ್ತಿದ್ದೆವೆನ್ನುವುದು ಸರಿಯಲ್ಲವೆಂದು ಈ ಸಾಕ್ಷಿದಾರರು ಹೇಳಲು ಬರುವುದಿಲ್ಲ. ಏಕೆಂದರೆ ಈ ಸಾಕ್ಷಿದಾರರು ಈ ಪ್ರಕರಣದಲ್ಲಿ ಆರೋಪಿಯಾಗಿರುವುದಿಲ್ಲ. ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಆರೋಪಿಗಳು ನಿರ್ದೋಷಿಯಾಗಿದ್ದರೂ ಅದನ್ನು ಈ ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣಿಸಲು ಬರಲಾರದು. ಏಕೆಂದರೆ ಕ.ಅ. ಕಾಯ್ದೆ 1965ರ ಕಲಂ 43ಎ(2) ರಲ್ಲಿ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪಿಗಳನ್ನು ಅಭಿಯೋಜನೆಗೆ ಒಳಪಡಿಸಿರಲಿ ಅಥವಾ ಇಲ್ಲದಿರಲಿ ಅಂತಹ ಪ್ರಕರಣದಲ್ಲಿ ಒಳಗೊಂಡಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದಿದೆ. ಅಲ್ಲದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯ ಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್-2002, ಕೆ.ಎಆರ್1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ. ಈ ಆದೇಶವನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ.

Rejecting the Contention of the owner of the seized vehicle that non-filling of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಈ ಎಲ್ಲ ಕಾರಣಗಳಿಂದಾಗಿ ಘಟನೆ ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಮತ್ತು ವಾಹನದ ಮಾಲೀಕರ ಗಮನಕ್ಕೆ ಬರದೇ ಈ ಕೃತ್ಯ ಸಂಭವಿಸಿದೆ ಎಂಬುದನ್ನು ಎದುರುದಾರರ ಪಕ್ಷದವರು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸದಿರುವುದರಿಂದ ಎರಡನೆ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

19. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ. 62/2001 ದಿನಾಂಕ: 15.7.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ:183/2001 ದಿನಾಂಕ: 21.7.2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾ ವಿಭಾಗ, ಕಾರವಾರ ರವರ ಗುನ್ಹೆ ಸಂಖ್ಯೆ. 32/1998-99, ದಿನಾಂಕ: 23.11.1998 ರಲ್ಲಿ ಜಪ್ತಿಯಾದಂತಹ ಜೀಪ್ ಸಂಖ್ಯೆ: ಕೆಎ-04/ಎಂ-5976 ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಪ್ರಾಧಿಕಾರದ ಆದೇಶ ಸಂಖ್ಯೆ:ಅಬಕಾರಿ/ಸಿಆರ್ಎಂ/ಡಿಟಿಸಿಆರ್/145/98-99 ದಿನಾಂಕ: 23.12.1998 ನೇದರಂತೆ ಈ ಪ್ರಕರಣದಲ್ಲಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವ ವಾಹನದ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸವಿಯ ಅಕ್ಟೋಬರ್ ತಿಂಗಳ 27ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ತಿದ್ದಿದ ನಂತರ ಗಣಕೀಕೃತಗೊಳಿಸಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಕೆ.ಸಿ. ಹರಿದಾಸ್**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ. 1:- ಯು.ಕೆ. ನಾಯ್ಕ, ಅ.ನಿ.

ಪ್ರಾ.ಸಾ.ನಂ. 2:- ಎಸ್.ಎಸ್. ಖತೀಬ, ಅ.ನಿ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯು. 1 : ಅಂಜಿನಪ್ಪ ತಂದೆ ಗಂಗಪ್ಪಾ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು**

| | | |
|---|---|---|
| ನಿಶಾನೆ ಪಿ 1 | : | ಮಹಜರ್ |
| ನಿಶಾನೆ ಪಿ 1 ಎ | : | ಮಹಜರ್ ಮೇಲಿನ ಫಿರ್ಯಾದುದಾರರ ಸಹಿ |
| ನಿಶಾನೆ ಪಿ 2 | : | ಫಿರ್ಯಾದು |
| ನಿಶಾನೆ ಪಿ 2 ಎ | : | ಫಿರ್ಯಾದಿನ ಮೇಲಿನ ಸಹಿ |
| ನಿಶಾನೆ ಪಿ 3 | : | ಪ್ರ.ಮಾ. ವರದಿ |
| ನಿಶಾನೆ ಪಿ 3 ಎ | : | ಪ್ರ.ಮಾ. ವರದಿಯ ಮೇಲಿನ ಸಹಿ |
| ನಿಶಾನೆ ಪಿ 4 | : | ಸ್ವತ್ತಿನ ಪಟ್ಟಿ |
| ನಿಶಾನೆ ಪಿ 4 ಎ | : | ಸ್ವತ್ತಿನ ಪಟ್ಟಿಯ ಮೇಲಿನ ಸಹಿ |
| ನಿಶಾನೆ ಪಿ 5 | : | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ 5 ಎ | : | ರಾಸಾಯನಿಕ ವಿಶ್ಲೇಷಣಾ ವರದಿಯ ಮೇಲಿನ ಸಹಿ |

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಡಿ.1 : ಮಾನ್ಯ ಜೆ.ಎಂ.ಎಫ್.ಸಿ. ಕಾರವಾರದ ಸಿ.ಸಿ. ನಂ. 166/2000 ನೇದರ ತೀರ್ಪಿನ ಪ್ರತಿ

**ಕೆ.ಸಿ. ಹರಿದಾಸ್**

ಪಿ.ಆರ್. 1591 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**
**ನಂ:ಇಎಕ್ಸ್‌ಇ:3:ಸಿಆರ್‌ಎಂ:67:99-2000, ದಿನಾಂಕ: 12ನೇ ಆಗಸ್ಟ್ 2004**

**ಉಪಸ್ಥಿತರು** : ಶ್ರೀ ಮಹಮದ್ ಇಲಿಯಾಸ್ ಅಹಮದ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು** **ವಿರುದ್ಧ** **ಆರೋಪಿಗಳು**
ಅಬಕಾರಿ ನಿರೀಕ್ಷಕರು, ಅಬು ಮತ್ತು ಇತರರು
ಅಬಕಾರಿ ತನಿಖಾ ಠಾಣೆ, ಪೆರಂಬಾಡಿ

**ಪ್ರಕರಣದ ಮುಖ್ಯಾಂಶಗಳು:-**

ದಿನಾಂಕ: 21.1.2000 ರಂದು ವಿರಾಜಪೇಟೆ ತಾಲ್ಲೂಕಿನಲ್ಲಿರುವ ಅಬಕಾರಿ ಪೆರಂಬಾಡಿ ತನಿಖಾ ಠಾಣೆಯ ಅಬಕಾರಿ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಯ ಬಗ್ಗೆ ವಾಹನಗಳ ತಪಾಸಣೆ ಮಾಡುತ್ತಿದ್ದಾಗ ಸಮಯ ಸುಮಾರು ರಾತ್ರಿ 10-00 ಗಂಟೆಗೆ ಬಿಟ್ಟಂಗಾಲದ ಕಡೆಯಿಂದ ಮಾಕುಟ್ಟ ಕೇರಳದ ಕಡೆಗೆ ಬರುತ್ತಿದ್ದ ಲಾರಿ ನಂ. ಕೆ.ಎಲ್.-12-ಎ-428 ರನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಲಾರಿಯಲ್ಲಿ ಕಲ್ಲಂಗಡಿ ಹಣ್ಣುಗಳನ್ನು ತುಂಬಲಾಗಿದ್ದು, ಸಂಶಯದಿಂದ ಕೆಲವು ಹಣ್ಣುಗಳನ್ನು ಬದಿಗೆ ಸರಿಸಿದಾಗ ಹಣ್ಣಿನ ಕೆಳಗಡೆ ರಟ್ಟಿನ ಪೆಟ್ಟಿಗೆಗಳು ಕಂಡು ಬಂದಿದ್ದು, ಇದರಿಂದ ಅನುಮಾನಗೊಂಡು ಅವುಗಳಲ್ಲಿ ಒಂದನ್ನು ಬಿಚ್ಚಿ ನೋಡಲಾಗಿ, ಮದ್ಯದ ಬಾಟಲಿಗಳು ಕಂಡು ಬಂದಿದ್ದು, ಸದರಿ ಲಾರಿಯಲ್ಲಿದ್ದವರಲ್ಲಿ, ಮದ್ಯಸಾಗಾಣಿಕೆ ಮಾಡಲು ರಹದಾರಿ ಪತ್ರ ವಗೈರೆ ವಿಚಾರಿಸಿದಾಗ ಯಾವುದೂ ಇಲ್ಲವೆಂದು ತಿಳಿಸಿರುತ್ತಾರೆ. ನಂತರ ಎಲ್ಲಾ ಕಲ್ಲಂಗಡಿ ಹಣ್ಣುಗಳನ್ನು ಕೆಳಗಿಳಿಸಿ ಮದ್ಯದ ಪೆಟ್ಟಿಗೆಗಳನ್ನು ಎಣಿಸಿ ನೋಡಲಾಗಿ ಒಟ್ಟು 407 ಪೆಟ್ಟಿಗೆಗಳಿದ್ದು, ಅವುಗಳಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿ 3663.000 ಲೀಟರ್ ಇರುವುದು ಪತ್ತೆ ಆಗಿರುತ್ತದೆ. ಲಾರಿಯಲ್ಲಿ ಯಾವುದೇ ಅಧಿಕೃತ ರಹದಾರಿ ಪತ್ರ ವಗೈರೆ ಇಲ್ಲದೇ ಮದ್ಯವನ್ನು ಸಾಗಾಣಿಕೆ ಮಾಡುವುದು ಅಬಕಾರಿ ಕಾಯ್ದೆಗೆ ವಿರೋಧವಾದುದರಿಂದ ಲಾರಿಯಲ್ಲಿದ್ದ 1ನೇ ಅಬು, ತಂದೆ ಅಹಮ್ಮದ್, 2ನೇ ಜಮಾಲ್, ತಂದೆ ಅಮೀರ್, 3ನೇ ಮಹಮದ್, ತಂದೆ ಅಹಮ್ಮದ್ ಹಾಗೂ ನಾಲ್ಕನೇಯದಾಗಿ ವಾಹನದ ಮಾಲೀಕರ ಮೇಲೆ ಪೆರಂಬಾಡಿ ತನಿಖಾ ಠಾಣೆಯ ಅಬಕಾರಿ ನಿರೀಕ್ಷಕರವರು ತನಿಖಾ ಠಾಣೆಯ ಪ್ರ.ವ.ವ. ನಂ:6/99-2000, ದಿ:21.1.2000 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಈ ಪ್ರಕರಣದ ಬಗ್ಗೆ ಅಬಕಾರಿ ಕಾಯ್ದೆ ಕಲಂ 43ಬಿ ರ ಪ್ರಕಾರ ದಿನಾಂಕ: 25.4.2000 ರಂದು ಕಾರಣ ಕೇಳುವ ನೋಟೀಸ್ ನೀಡಲಾಯಿತು. ಈ ಕಾರಣ ಕೇಳುವ ನೋಟಿಸಿಗೆ ಉತ್ತರವಾಗಿ ಮೆ|| ಮೆ.ಪಿ.ಫೈನಾನ್ಸ್ ರವರ ಪರವಾಗಿ ಕೆ.ಜಲೀಲ್, ತಂದೆ ಹುಸೇನ್ ಇವರು ಈ ಪ್ರಾಧಿಕಾರದ ಮುಂದೆ ಒಂದು ಲಿಖಿತ ಅರ್ಜಿಯನ್ನು ಸಲ್ಲಿಸಿ ಈ ಪ್ರಾಧಿಕಾರದಲ್ಲಿ ವಶಪಡಿಸಿಕೊಂಡ ವಾಹನವನ್ನು ಮೆ|| ಎಂ.ಪಿ. ಫೈನಾನ್ಸ್ ರವರಿಗೆ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಿ ಕೊಡಬೇಕಾಗಿ ಕೋರಿಕೊಂಡಿರುತ್ತಾರೆ.

ಮತ್ತು ದಿ: 2.8.2000 ರಂದು ಶ್ರೀ ನಾರಾಯಣ ನಂಬಿಯಾರ್ ಇವರು ಈ ಪ್ರಾಧಿಕಾರದ ಮುಂದೆ ಅರ್ಜಿ ಸಲ್ಲಿಸಿ ತಾನು ಸದರಿ ವಾಹನವನ್ನು ಎಂ.ಪಿ.ಅಲಿ ಇವರಿಗೆ ಮಾರಾಟ ಕರಾರು ಪತ್ರದ ಅಗ್ರಿಮೆಂಟ್ ಮೇಲೆ ಮಾರಾಟ ಮಾಡಿರುವುದಾಗಿಯೂ ಸದರಿ ವಾಹನದ ಯಾವುದೇ ಜವಾಬ್ದಾರಿ ತನಗಿಲ್ಲವೆಂದು ತಿಳಿಸಿದ್ದು, ಸದರಿ ವಶಪಡಿಸಿಕೊಂಡ ವಾಹನಕ್ಕೆ ಇಬ್ಬರು ಆಸಾಮಿಗಳು ತಾವು ಮಾಲೀಕರೆಂದು ಗುರುತಿಸಿಕೊಂಡ ಕಾರಣ ಅರ್ಜಿದಾರರ ಅರ್ಜಿಯಲ್ಲಿ ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೆ ಸಲ್ಲಿಸಲಾದ ಅರ್ಜಿಯನ್ನು ವಜಾ ಮಾಡಲು ಸಹಾಯಕ ಅಭಿಯೋಜಕ ನಿರ್ದೇಶಕರು ತಕರಾರು ಸಲ್ಲಿಸಿದ್ದರಿಂದ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲಿಲ್ಲ. ಮತ್ತು ವಾಹನಕ್ಕೆ ಇಲಾಖೆಯು ವಿಧಿಸಿದ ಮೌಲ್ಯವು ಹೆಚ್ಚಾದ ಕಾರಣ ಅಷ್ಟು ಮೊತ್ತದ ಮೌಲ್ಯವನ್ನು ಸರ್ಕಾರಕ್ಕೆ ಕಟ್ಟಲು ವಾಹನ ಮಾಲೀಕರು ನಿರಾಕರಿಸಿದ್ದರಿಂದ ವಾಹನದ ಮೇಲಿನ ಮೊಕದ್ದಮೆಯನ್ನು ಈ ಪ್ರಾಧಿಕಾರದಲ್ಲಿ ನಡೆಸಿಕೊಂಡು ಬರುವ ಬಗ್ಗೆ ಸದರಿ ವಾಹನದ ಅಧಿಕೃತ ಮಾಲೀಕರು ಯಾರೆಂದು ತಿಳಿಯದ ಕಾರಣ ಮತ್ತು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದರೂ ಸಹ ಅವರಿಂದ ಮಾಲೀಕರ ಬಗ್ಗೆ ಯಾವುದೇ ವಿವರ ತಿಳಿಯದ ಕಾರಣ ವಾಹನವು ಇಲಾಖೆಯ ವಶದಲ್ಲಿಯೇ ಬಾಕಿ ಉಳಿದಿರುತ್ತದೆ. ಇದು ತೆರೆದ ಪ್ರದೇಶದಲ್ಲಿ ನಿಂತು ಸುಮಾರು ನಾಲ್ಕು ವರ್ಷಗಳಾಗುತ್ತಾ ಬಂದಿದ್ದು, ಕೊಡಗಿನಲ್ಲಿ ಮಳೆ ಹೆಚ್ಚಾಗಿದ್ದು, ಮಳೆ, ಬಿಸಿಲು, ಗಾಳಿ ಪ್ರಕೃತಿಯ ವಿಕೋಪಕ್ಕೆ ಅದರ ಬಿಡಿ ಭಾಗಗಳು ತೀರಾ ಹಾಳಾಗಿರುತ್ತದೆ. ಮತ್ತು ಇನ್ನು ಹೆಚ್ಚು ಸಮಯ ಹೀಗೇ ನಿಂತಿದ್ದಲ್ಲಿ ಸರ್ಕಾರಕ್ಕೆ ಬರುವ ಅಲ್ಪ ಆದಾಯವು ಕೈತಪ್ಪುವ ಸಾಧ್ಯತೆ ಇರುತ್ತದೆ.

ಸದರಿ ವಾಹನಕ್ಕೆ ಸಂಬಂಧಪಟ್ಟವರಿಗೆ ಕೊನೆಯದಾಗಿ ತಿಳಿಸಲು ದಿನಾಂಕ: 6.5.04ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಯಿತು. ಹಾಗೂ ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದ್ದು, ರಾಸಾಯನಿಕ ತಜ್ಞರ ವರದಿಯಂತೆ ಮದ್ಯವೆಂದು ಸಾಬೀತಾದ್ದರಿಂದ ಅಬಕಾರಿ ಕಾನೂನಿನ ಅರಿವಿದ್ದು ಮಾಡಿದಂತಹ ಕೃತ್ಯವಾದ್ದರಿಂದ ಸದರಿ ಲಾರಿ ನಂ: ಕೆ.ಎಲ್-13-ಎ-428 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವಾಗಿ ಈ ಪ್ರಾಧಿಕಾರಕ್ಕೆ ಕಂಡು ಬಂದ ಕಾರಣ ಈ ಕೆಳಗಿನಂತೆ ಆದೇಶ.

**ಆದೇಶ ಸಂ: ಇಎಕ್ಸ್‌ಇ:3:ಸಿಆರ್‌ಎಂ:67/99-2000, ದಿನಾಂಕ: 12ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ನನಗೆ ಸರ್ಕಾರದಿಂದ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಪೆರಂಬಾಡಿ ತನಿಖಾ ಠಾಣೆ ರವರ ಮೊ.ಸ. 6/99-2000, ದಿ: 21.1.2000 ರಂತೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ನಂ: ಕೆ.ಎಲ್.-13-ಎ-428 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 ಸಿ ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಪಿ.ಆರ್. 1592 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ. ವಾಹನ. 23/1998-99**

**ಉಪಸ್ಥಿತರು** : ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಫಿರ್ಯಾದುದಾರರು** : ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ
**ಆರೋಪಿಗಳು** : 1) ಸಿ.ಪಿ. ಮಹಮ್ಮದ್, (2) ಕೆ.ಪಿ. ಇಸ್ಮಾಯಿಲ್, (3) ಜಗದೀಶ್
**ಬಾಧ್ಯತೆದಾರರು** : ಅಬ್ದುಲ್ ರೆಹಮಾನ್ ಬಿನ್ ಮೊಹಮ್ಮದ್,
ಕುಂಜಲಾವಾಸಿ, ಕಾಕಬೆ ಅಂಚೆ, ಎಂ.ಜಿ. ರಸ್ತೆ, ಕೂರ್ಗ, (ಕೊಡಗುಜಿಲ್ಲೆ)

**ಪ್ರಸ್ತಾವನೆ:**

ದಿ: 3.9.1998ರಂದು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಮತ್ತು ಸಿಬ್ಬಂದಿಯವರು ಬಟ್ಟೆಮಲ್ಲಪ್ಪ ಶಾಖೆಯಲ್ಲಿ ಗಸ್ತು ಮಾಡುತ್ತಿದ್ದಾಗ ಹೊಸನಗರ ತಾಲ್ಲೂಕು ಕೆರೆಹಳ್ಳಿ ಹೋಬಳಿ ಕೆ. ಹುಣಸೆಹಳ್ಳಿ ಗ್ರಾಮದ ಬಳಿಯ ಆನಂದಪುರಂ ಬಟ್ಟೆಮಲ್ಲಪ್ಪ ರಸ್ತೆಯಲ್ಲಿ ಪಂಚರ ಸಮಕ್ಷಮ ಕಾಯುತ್ತಿರುವಾಗ ಒಂದು ವಾಹನ ಆನಂದಪುರಂ ಕಡೆಯಿಂದ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರು ನಿಂತ ಸ್ಥಳದಿಂದ ಸುಮಾರು 20 ಮೀಟರ್ ದೂರದಲ್ಲಿ ವಾಹನ ನಿಲ್ಲಿಸಿ ವಾಹನದಿಂದ ಹಿಂದಿನ ಸೀಟಿನ ಕೆಲವು ಆಸಾಮಿಗಳು ಇಳಿದು ಓಡಿಹೋದರು ಇದರಿಂದ ಅನುಮಾನ ಬಂದು ಮುಂದಿನ ಸೀಟಿನಲ್ಲಿದ್ದವರನ್ನು ಎಲ್ಲಿಗೆ ಹೋಗುತ್ತಿರುವಿರೆಂದು ಕೇಳಿದಾಗ ಹುಂಚದಿಂದ ಬೆಳಗಾಂಗೆ ಹೋಗುವುದಾಗಿ ತಿಳಿಸಿರುವ ವಾಹನ ಅಂಬಾಸಿಡರ್ ಕಾರು ಕೆಎ-12-ಎಂ-4970 ಆಗಿದ್ದು, ಕಾರಿನ ಡಿಕ್ಕಿಯಲ್ಲಿ ಶ್ರೀಗಂಧದ 65 ಸಣ್ಣಸಣ್ಣ ತುಂಡುಗಳು ಮತ್ತು ಚಕ್ಕೆಗಳು ಇದ್ದವು. ಮತ್ತು ಈ ಶ್ರೀಗಂಧಕ್ಕೆ ರಹದಾರಿ ಇಲ್ಲವೆಂದು ಆಸಾಮಿಗಳು ಮತ್ತು ಈ ಶ್ರೀಗಂಧದ ತುಂಡುಗಳನ್ನು ಬಿಲ್ಲೇಶ್ವರ ಮತ್ತು ಹುಂಚದಿಂದ ತುಂಬಿಕೊಂಡು ಬೆಳಗಾಂಗೆ ಸಾಗಿಸುತ್ತಿರುವುದಾಗಿ ತಿಳಿಸಿದರು. ವಾಹನದಲ್ಲಿದ್ದ ಆಸಾಮಿಗಳು 1) ಸಿ.ಪಿ. ಮಹಮ್ಮದ್ ಬಿನ್ ಅಹಮ್ಮದ್ ಕುಟ್ಟಿ 24 ವರ್ಷ, ತಲಚೇರಿ ತಾಲ್ಲೂಕು, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ 2) ಕೆ.ಪಿ. ಇಸ್ಮಾಯಿಲ್ ಬಿನ್ ಅಬೂಟಿ ಹಾಜಿ 27 ವರ್ಷ, ತಾಲೀಪರಂಜ ತಾಲ್ಲೂಕು, ಕಣ್ಣೂರು ಜಿಲ್ಲೆ, ಕೇರಳರಾಜ್ಯ 3) ಜಗದೀಶ್ ಬಿನ್ ರಾಮಣ್ಣ ಬಿಲ್ಲೇಶ್ವರ 25 ವರ್ಷ ಹುಂಚ ಅಂಚೆ, ಹೊಸನಗರ ತಾಲ್ಲೂಕು ಎಂದು ತಿಳಿಸಿದರು. ಓಡಿಹೋದವರು ಯೋಗೇಶ್ವರ್ ಬಿನ್ ಹನುಮಂತಪ್ಪ ಕಂಜಿಕೊಪ್ಪ, ಹೊನ್ನಾಳಿ ತಾಲ್ಲೂಕು, ಹಾಲಿವಾಸ, ಶೆಟ್ಟಿಬೈಲು ಹುಂಚ ಪೋಸ್ಟ್ ಹೊಸನಗರ 2) ಚಂದ್ರ, ಹೊಸಗದ್ದೆ, ತೀರ್ಥಹಳ್ಳಿ ತಾಲ್ಲೂಕು ಎಂದು ತಿಳಿಸಿದರು. ಹಾಗೂ ಈ ಶ್ರೀಗಂಧಕ್ಕೆ ಯಾವುದೇ ನಂಬರ್ ಇರಲಿಲ್ಲ. ಹಾಗೂ ಇವುಗಳ ಮೇಲೆ ಇಲಾಖಾ ಛಾಪಾವಿರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಶ್ರೀಗಂಧ ಮತ್ತು ಆಸಾಮಿಗಳನ್ನು ಇಲಾಖಾಪರ ಜಪ್ತಿ ಮಾಡಿ ಮಹಜರ್ ಕ್ರಮ ನಡೆಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 84, 86, 87 71(ಎ), ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂ. 52/98-99ನ್ನು ದಾಖಲಿಸಿ ಆಸಾಮಿಗಳನ್ನು ಜೆಎಂಎಫ್‌ಸಿ ಹೊಸನಗರಕ್ಕೆ ಒಪ್ಪಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರದ ವಾಹನ ಶೆಡ್‌ನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಬಗ್ಗೆ ಈ ನ್ಯಾಯಾಲಯದ ದಿ: 23.12.1998ರಲ್ಲಿ ಪ್ರಕಟಣೆ ಹೊರಡಿಸಿದೆ. ಈ ಪ್ರಕಟಣೆಯಾದ ದಿ: 10.1.99ರಲ್ಲಿ ಪ್ರಜಾವಾಣಿ, ಉದಯವಾಣಿ, ಡೆಕ್ಕನ್‌ಹೆರಾಲ್ಡ್ ದಿನಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

ನಂತರ ಈ ವಾಹನದ ಬಗ್ಗೆ ಶ್ರೀ ಅಬ್ದುಲ್ ರೆಹಮಾನ್ ಬಿನ್ ಮಹಮ್ಮದ್ ಕುಂಜಲಾ ಗ್ರಾಮದ ಕಾಕಾಬೆ ಅಂಚೆ, ಎಂ.ಜಿ. ರಸ್ತೆ ಕೂರ್ಗ ಇವರು ಮಾನ್ಯ ಶ್ರೀ ಶ್ರೀ ಆರೀಫ್ ಆಲಿಖಾನ್ ವಕೀಲರು, ಸಾಗರ ಇವರ ಮುಖಾಂತರ ಕ್ಲೇಮ್ ಅರ್ಜಿಯನ್ನು ದಿ: 1.1.99ರಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಅರ್ಜಿಯಲ್ಲಿ ಇವರ ಮನವಿ ಈ ರೀತಿ ಇದೆ. ಈ ಕೃತ್ಯದಲ್ಲಿ ಜಪ್ತಾದ ವಾಹನ ಅಂಬಾಸಿಡರ್ ಕಾರು ಕೆಎ-12-ಎಂ-4970 ಬಾಧ್ಯತೆದಾರರೆಂದು ಈ ವಾಹನವು ಶ್ರೀಗಂಧ ಅಕ್ರಮ ಸಾಗಾಣಿಕೆಯಲ್ಲಿ ಜಪ್ತಾಗಿದೆ. ಎಂದು ಈ ವಾಹನವನ್ನು ವಾಹನ ಚಾಲಕರು ಮಡಿಕೇರಿಯಿಂದ ಸಾಗರಕ್ಕೆ ಸಂಬಂಧಿಕರನ್ನು ಬಿಡಲು ತೆಗೆದುಕೊಂಡು ಹೋಗಿರುತ್ತಾರೆಂದು ಸಾಗರಕ್ಕೆ ಬಿಟ್ಟು ವಾಪಾಸ್ ಬರುವಾಗ ಮಾರ್ಗದಲ್ಲಿ ಕೆಲವು ಅಪರಿಚಿತ ಪ್ರಯಾಣಿಕರು ಕಾರನ್ನು ನಿಲ್ಲಿಸಿ ಶಿವಮೊಗ್ಗಕ್ಕೆ ಅವರನ್ನು ಬಿಡಲು ಕೋರಿದರೆಂದು ಅವರ ಬ್ಯಾಗಿನಲ್ಲಿ ಶ್ರೀಗಂಧ ಇಟ್ಟಿರುತ್ತಾರೆಂದು ವಾಹನ ನಿಲ್ಲಿಸಿದಾಗ ಅವರು ಬಿಟ್ಟು ಓಡಿದರೆಂದು ಈ ಕೃತ್ಯದಲ್ಲಿ ವಾಹನ ಮಾಲೀಕರಾಗಲೀ, ಚಾಲಕರಾಗಲೀ ಭಾಗಿಯಾಗಿಲ್ಲವೆಂದು ಇವರು ಮುಗ್ಧರೆಂದು ಇವರ ಗಮನಕ್ಕೆ ಬಾರದೆ ಈ ಕೃತ್ಯವಾಗಿರುತ್ತದೆಂದು ಅಲ್ಲದೇ ಈ ವಾಹನವನ್ನು ಹಾಗೇ ನಿಲ್ಲಿಸಿದಾಗ ಗಾಳಿ, ಮಳೆ, ಬಿಸಿಲಿಗೆ ಹಾಳಾಗುತ್ತದೆಂದು ಈ ವಾಹನದ ಮೌಲ್ಯ ಕಡಿಮೆಯಾಗಿರುತ್ತದೆಂದು ಮತ್ತು ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಡುವಾಗ ಘನ ನ್ಯಾಯಾಲಯ ವಿಧಿಸುವ ಷರತ್ತಿಗೆ ಬದ್ಧರಿದ್ದಾರೆಂದು ವಾಹನ ಬಿಟ್ಟುಕೊಡಲು ಕೋರಿರುತ್ತಾರೆ.

ದಿ: 25.9.2004ರಂದು ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು ಈ ಪ್ರಕರಣದಲ್ಲಿ ವಾದ ಮಾಡಿ ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಪ್ರತ್ಯಕ್ಷವಾಗಿ ಹಿಡಿದಿರುತ್ತಾರೆ. ಈ ಘಟನೆ ನಡೆದ ನಂತರ ವಾಹನ ಮಾಲೀಕರು ಮತ್ತು ವಕೀಲರು ಈ ಪ್ರಕರಣದಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿರುತ್ತಾರೆ. ಆದ್ದರಿಂದ ಈ ವಾಹನವನ್ನು ವಾಹನ ಮಾಲೀಕಗೆ ಬಿಟ್ಟುಕೊಡದೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಮುಂದುವರೆದು ಈ ವಾಹನದ ಮತ್ತು ಶ್ರೀಗಂಧದ ಬಗ್ಗೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ನ್ಯಾಯಾಲಯದಿಂದ ದಿ: 28.2.2004 ಮತ್ತು 23.4.2004ರಲ್ಲಿ ಕಾರಣಕೇಳಿ ಪತ್ರವನ್ನು ಜಾರಿ ಮಾಡಿದ್ದರೂ ಸಹ ಇಲ್ಲಿಯವರೆವಿಗೂ ಯಾವುದೇ ಉತ್ತರ ನೀಡಿರುವುದಿಲ್ಲ. ಹಾಗೂ ಈ ಪ್ರಕರಣದ ವಿಚಾರಣಾ ಸಮಯಕ್ಕೆ ಯಾರೂ ಸಹಾ ಹಾಜರಾಗಿರುವುದಿಲ್ಲ. ಇದರಿಂದ ಈ ಪ್ರಕರಣದಲ್ಲಿ ಭಾಗವಹಿಸಲು ವಾಹನ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಮತ್ತು ಈ ವಾಹನವು ಶ್ರೀಗಂಧ ಅಕ್ರಮ ಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲವೆಂದು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963, 71ಎ ರಿಂದ ಜಿ ಪ್ರಕಾರ ಜಪ್ತಿ ಮಾಡಿದ ವಾಹನ ಅಂಬಾಸಿಡರ್ ಕಾರ್ ನಂ. ಕೆಎ-12-ಎಂ-4970 (ಛಾಸ್ಸಿಸ್ ನಂಬರ್ 111-652869, ಇಂಜಿನ್ ನಂ 6ಇಡಿ671271)ನ್ನು ಮತ್ತು ಅದರಲ್ಲಿದ್ದ ಶ್ರೀಗಂಧದ 65 ಸಣ್ಣ ತುಂಡು ಮತ್ತು ಚಕ್ಕೆಗಳನ್ನು 97 ಕೆ.ಜಿ.ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ಆದೇಶವು ತೆರೆದ ನ್ಯಾಯಾಲಯದಲ್ಲಿ ನನ್ನ ಉತ್ತಲೇಖದಲ್ಲಿ ಬರೆಯಿಸಿ ಗಣಕ ಯಂತ್ರದಲ್ಲಿ ಮುದ್ರಿಸಿ ಸರಿಪಡಿಸಿ ದಿ: 5.10.2004ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ಹೊರಡಿಸಿದೆ. ಈ ಆದೇಶ ಹೊರಡಿಸಿದ 30 ದಿನಗಳ ಒಳಗಾಗಿ ಯಾರು ಮೇಲ್ಮನವಿ ಹೋಗದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಪಿ.ಆರ್. 1593 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

### ಪ್ರಕಟಣೆ

**ಜಿ:ಸ:ಕ:ಅ:ಉ:ಎಸ್:4:ಸಿ:ಆರ್:25:2004-05, ದಿನಾಂಕ: 9ನೇ ನವೆಂಬರ್ 2004**

**ವಿಷಯ:** 2004-05ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧಿಕರಣ ತರಬೇತಿಗೆ ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಲ್:68:ಇ.ಎಸ್.ಡಬ್ಲ್ಯೂ:89 ದಿನಾಂಕ: 2.11.2004.

2004-05ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ, ಕಾನೂನು ಪದವೀಧರರಲ್ಲಿ ನ್ಯಾಯಾಧೀಕರಣ ತರಬೇತಿಗಾಗಿ ಆಯ್ಕೆ ಮಾಡಲು ಈ ಕೆಳಕಂಡ ನಿಬಂಧನೆಗಳಿಗೆ ಅನುಗುಣವಾಗಿ ಅರ್ಹ ಪರಿಶಿಷ್ಟ ಜಾತಿ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ನಮೂನೆಯನ್ನು ಕಛೇರಿ ವೇಳೆಯಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ 30.11.2004 ಆಗಿರುತ್ತದೆ.

### ನಿಬಂಧನೆಗಳು

1. ಅಭ್ಯರ್ಥಿಯು ಪರಿಶಿಷ್ಟ ಜಾತಿ ಕಾನೂನು ಪದವೀಧರರಾಗಿರಬೇಕು. ಅರ್ಜಿ ಸಲ್ಲಿಸಲು ಕಡೆ ದಿನಾಂಕಕ್ಕೆ ಕಾನೂನು ಪದವಿಯಲ್ಲಿ ತೇರ್ಗಡೆಯಾಗಿ 2 ವರ್ಷ ಮೀರಿರಬಾರದು.
2. ಕಾನೂನು ಪದವೀಧರರು 35 ವರ್ಷಗಳ ವಯೋಮಿತಿಯೊಳಗಿರಬೇಕು.
3. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳವರೆಗೆ ತರಬೇತಿ ಪಡೆಯಬೇಕು ಹಾಗೂ ತರಬೇತಿಯ ಅವಧಿಯಲ್ಲಿ ರೂ. 1,000-00 ಮಾಸಿಕ ಶಿಷ್ಯವೇತನ ಮಂಜೂರು ಮಾಡಲಾಗುವುದು. ಮಧ್ಯದಲ್ಲಿ ತರಬೇತಿ ಬಿಟ್ಟು ಹೋದಲ್ಲಿ ಮಂಜೂರು ಮಾಡಿರುವ ಶಿಷ್ಯವೇತನವನ್ನು ವಸೂಲಿ ಮಾಡಲಾಗುವುದು.
4. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತನ್ನ ಹೆಸರನ್ನು ನೋಂದಾಯಿಸಿರಬೇಕು.
5. ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ.18,000-00 ಮೀರಿರಬಾರದು.

ಪಿ.ಆರ್. 1594 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

**ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ 34/2004-05, ದಿನಾಂಕ: 16ನೇ ನವೆಂಬರ್ 2004**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ತುಮಕೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯತಿಗಳಲ್ಲಿ 5000 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ 03 ಮತ್ತು 7000ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 13 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

### ಅನುಬಂಧ

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 1 | 2 | 3 | | | |
| **5000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 1. | 37-ಬೆಳಗುಂಬ | 1. | ಬೆಳಗುಂಬ | 2. | ಪಂಡಿತನಹಳ್ಳಿ |
| | | 3. | ಕರಿಗಿರಿಪಾಳ್ಯ | 4. | ಕುಂದೂರು |
| | | 5. | ಅರಳಿಹಾಳ್ | | |
| 2. | 39-ಸೋರೆಕುಂಟೆ | 1. | ಸೋರೆಕುಂಟೆ | 2. | ಮಲ್ಲೇನಹಳ್ಳಿ |
| | | 3. | ಪಿ. ಗೊಲ್ಲಹಳ್ಳಿ | 4. | ಪುರದಕುಂಟೆ |
| | | 5. | ಹುಚ್ಚಬಸವನಹಳ್ಳಿ | 6. | ಮಜ್ಜಿಗೆಕೆಂಪನಹಳ್ಳಿ |
| | | 7. | ಅಪ್ಪಿನಾಯಕನಹಳ್ಳಿ | 8. | ಲಿಂಗೇನಹಳ್ಳಿ |
| 3. | 41-ನೆಲಹಾಳ್ | 1. | ನೆಲಹಾಳ್ | 2. | ಗಿರಿಯನಪಾಳ್ಯ |
| | | 3. | ಗೌಡನಹಳ್ಳಿ | 4. | ದೇವರಹಳ್ಳಿ |
| | | 5. | ಚಿಕ್ಕಶೀಬಿ | 6. | ಸೋಮಸಾಗರ |
| | | 7. | ನಂದಿಹಳ್ಳಿ | 8. | ಕೋಡಿತಿಮ್ಮನಹಳ್ಳಿ |
| | | 9. | ತಿಪ್ಪೆದಾಸರಹಳ್ಳಿ | 10. | ಕೊಳಲುಕುಂಟೆ |
| | | 11. | ಕೆಂಪದಾಳಿಹಳ್ಳಿ | 12. | ಬಹುಜನಹಳ್ಳಿ |
| | | 13. | ಯಲದಡ್ಲು | | |

| 1 | 2 | 3 | | | |
|---|---|---|---|---|---|
| 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು | | | | | |
| 4. | 4-ಚಿಕ್ಕತೊಟ್ಲುಕೆರೆ | 1. | ಚಿಕ್ಕತೊಟ್ಲುಕೆರೆ | 2. | ತಿರುಮಲಪಾಳ್ಯ |
| | | 3. | ಸೋಗೇನಹಳ್ಳಿ | 4. | ತುಳಸಿಪುರ |
| | | 5. | ಹಿರೇಗುಂಡಗಲ್ | 6. | ಕರೀಕೆರೆ |
| | | 7. | ಕಲ್‌ಸೆಟ್‌ಕುಂಟೆ | 8. | ಹಿರೇತೊಟ್ಲುಕೆರೆ |
| | | 9. | ರಾಮಗೊಂಡನಹಳ್ಳಿ | 10. | ಸೀಗೆಪಾಳ್ಯ |
| 5. | 7-ಸ್ವಾಂದೇನಹಳ್ಳಿ | 1. | ಸ್ವಾಂದೇನಹಳ್ಳಿ | 2. | ಬೀರನಕಲ್ಲು |
| | | 3. | ವಡೇರಹಳ್ಳಿ | 4. | ಮುತ್ಸಂದ್ರ |
| | | 5. | ಯಲ್ಲಾಪುರ | 6. | ಅಜ್ಜಪ್ಪನಹಳ್ಳಿ |
| | | 7. | ಮಾರನಾಯಕನಹಳ್ಳಿ | | |
| 6. | 9-ಊರುಕೆರೆ | 1. | ಊರುಕೆರೆ | 2. | ಹೆಬ್ಬಾಕ ಅಮಾನಿಕೆರೆ |
| | | 3. | ಅಣ್ಣೇನಹಳ್ಳಿ | 4. | ಹೆಬ್ಬಾಕ |
| | | 5. | ನರಸಾಪುರ | 6. | ಕುಪ್ಪೂರು |
| | | 7. | ಹೊಸಹಳ್ಳಿ | | |
| 7. | 10-ಬೆಳ್ಳಾವಿ | 1. | ಬೆಳ್ಳಾವಿ | 2. | ಚಿಕ್ಕಬೆಳ್ಳಾವಿ |
| | | 3. | ಬೆಳ್ಳಾವಿ ಅಮಾನಿಕೆರೆ | 4. | ತಿಮ್ಲಾಪುರ |
| | | 5. | ಸಿಂಗೀಪುರ | 6. | ಟಿ. ಗೊಲ್ಲಹಳ್ಳಿ |
| | | 7. | ದೊಡ್ಡೇರಿ | 8. | ದೊಡ್ಡವೀರನಹಳ್ಳಿ |
| | | 9. | ದೇವರಾಜನಹಳ್ಳಿ | | |
| 8. | 12-ಬುಗುಡನಹಳ್ಳಿ | 1. | ಬುಗುಡನಹಳ್ಳಿ | 2. | ಹಾರೋನಹಳ್ಳಿ |
| | | 3. | ಬುಗುಡನಹಳ್ಳಿ ಅಮಾನಿಕೆರೆ | 4. | ಹನುಮಂತಪುರ |
| | | 5. | ಕನ್ನೇನಹಳ್ಳಿ | 6. | ಬಳ್ಳಾಪುರ |
| | | 7. | ಅಗಳಕುಂಟೆ | 8. | ಈಚಲಕುಂಟೆ |
| | | 9. | ಮುದಿಗೆರೆ | | |
| 9. | 13-ಮಲ್ಲಸಂದ್ರ | 1. | ಮಲ್ಲಸಂದ್ರ | 2. | ಮಲ್ಲಸಂದ್ರ ಅಮಾನಿಕೆರೆ |
| | | 3. | ಹಬ್ಬತ್ತನಹಳ್ಳಿ | 4. | ಕೊತ್ತಿಹಳ್ಳಿ ಕಾವಲ್ |
| | | 5. | ಮಲ್ಲಸಂದ್ರ ಬಳಗೆರೆ ಕಾವಲ್ | 6. | ಅಮಾನಿ ಹೊಸಕೆರೆ |
| | | 7. | ಗೊಲ್ಲಹಳ್ಳಿ | 8. | ಕುಂಕುಮನಹಳ್ಳಿ |
| | | 9. | ಅದಲಾಪುರ | 10. | ಹಾಲನೂರು |
| 10. | 15-ಊರ್ಡಿಗೆರೆ | 1. | ಊರ್ಡಿಗೆರೆ | 2. | ಬೆಳ್ಳಿಬಟ್ಟಲಹಳ್ಳಿ |
| | | 3. | ಸಾತಘಟ್ಟ | 4. | ಕುರುವೇಲು |
| | | 5. | ಕೊಡಿಗೇನಹಳ್ಳಿ | | |
| 11. | 17-ಹಿರೇಹಳ್ಳಿ | 1. | ಹಿರೇಹಳ್ಳಿ | 2. | ಕೋಳಿಹಳ್ಳಿ |
| | | 3. | ಸಂಗಾಪುರ | 4. | ಚಿಕ್ಕಹಳ್ಳಿ |
| | | 5. | ನಂದಿಹಳ್ಳಿ | 6. | ಪೆಮ್ಮನಹಳ್ಳಿ |
| | | 7. | ಢಣನಾಯಕನಪುರ | 8. | ಮಂಚಕಲ್‌ಕುಪ್ಪೆ |
| 12. | 18-ಮೈದಾಳ | 1. | ಮೈದಾಳ | 2. | ಮಾರಗೊಂಡನಹಳ್ಳಿ |
| | | 3. | ಕೊಂಡನಾಯಕನಹಳ್ಳಿ | 4. | ಸಿದ್ಧಗಂಗಾಮಠ |
| | | 5. | ರಾಮದೇವರಬೆಟ್ಟ | 6. | ಬಸವಾಪಟ್ಟಣ |
| | | 7. | ವದೇಕಲ್ಲು | 8. | ಬ್ಯಾತ |
| | | 9. | ಪಂಡಿತನಹಳ್ಳಿ | 10. | ತಿಮ್ಲಾಪುರ |
| 13. | 23-ಹೊಳಕಲ್ | 1. | ಹೊಳಕಲ್ಲು | 2. | ನರುಗನಹಳ್ಳಿ |
| | | 3. | ಹುಳ್ಳೇನಹಳ್ಳಿ | 4. | ಬಾಣಾವರ |
| | | 5. | ಚೋಳೇನಹಳ್ಳಿ | 6. | ಅಕ್ಕತಂಗಿಯರ ಕಟ್ಟೆ ಕಾವಲ್ |
| | | 7. | ವಡೇರಹಳ್ಳಿ | | |
| 14. | 27-ಹೆಬ್ಬೂರು | 1. | ಹೆಬ್ಬೂರು | 2. | ಹೆಬ್ಬೂರು ಅಮಾನಿಕೆರೆ |
| | | 3. | ನರಸಾಪುರ | 4. | ಸಂಗ್ಲಾಪುರ |
| | | 5. | ಕಲ್ಕೆರೆ | | |

| 1 | 2 | 3 | | | |
|---|---|---|---|---|---|
| 15. | 28-ಕಣಕುಪ್ಪೆ | 1. | ಕಣಕುಪ್ಪೆ | 2. | ಕಣಕುಪ್ಪೆ ಅಮಾನಿಕೆರೆ |
| | | 3. | ಲಿಂಗಾಪುರ | 4. | ಚಿಗಲಹಳ್ಳಿ |
| | | 5. | ಬನ್ನಿಕುಪ್ಪೆ | 6. | ರಾಮಕೃಷ್ಣಪುರ |
| | | 7. | ಬೈಚೇನಹಳ್ಳಿ | 8. | ದೊಡ್ಡಗೊಲ್ಲಹಳ್ಳಿ |
| | | 9. | ಕುಡುವನಕುಂಟೆ | 10. | ರಾಮೇನಹಳ್ಳಿ |
| | | 11. | ಗರಗದಕುಪ್ಪೆ | 12. | ರಾಯವಾರ |
| | | 13. | ತಿಮ್ಮಸಂದ್ರ | | |
| 16. | 30-ಸಿರಿವರ | 1. | ಸಿರಿವರ | 2. | ಗೋವಿಂದರಾಜಪುರ |
| | | 3. | ಪುರದಕಟ್ಟೆ | 4. | ಪುರದಕಟ್ಟೆ ಕಾವಲ್ |
| | | 5. | ರಾಯಾಪುರ | 6. | ಬೊಮ್ಮನಹಳ್ಳಿ |
| | | 7. | ರಾಗಿಮುದ್ದನಹಳ್ಳಿ | | |

ಎಂ.ಬಿ. ದ್ಯಾಬೇರಿ

ಪಿ.ಆರ್. 1595 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

## ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/35/2004-05, ದಿನಾಂಕ: 16ನೇ ನವೆಂಬರ್ 2004

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಗುಬ್ಬಿ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 22 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

### ಅನುಬಂಧ

| ಕ್ರ. ಸಂ. | ಗ್ರಾಮಪಂಚಾಯತಿ ಕೇಂದ್ರ ಸ್ಥಾನ | ಗ್ರಾಮಪಂಚಾಯತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 1 | 2 | 3 | | | |
| 7000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು | | | | | |
| 1. | 3-ಅಂಕಸಂದ್ರ | 1. | ಅಂಕಸಂದ್ರ | 2. | ದೊಡ್ಡಹೆಡಿಗೆಹಳ್ಳಿ |
| | | 3. | ಕುರುಬರಹಳ್ಳಿ | 4. | ಚಿಕ್ಕ ಹೆಡಿಗೆಹಳ್ಳಿ |
| | | 5. | ದಾಸಪ್ಪನಹಳ್ಳಿ | 6. | ದೇವರಹಳ್ಳಿ |
| | | 7. | ರೇವನಾಳು | 8. | ತೊಗರಿಗುಂಟೆ |
| | | 9. | ಸಿರಿವಲ್ಲೆಹಳ್ಳಿ | 10. | ಪೇಟೆ ಕುರುಬರಹಳ್ಳಿ (ಬೇ) |
| | | 11. | ತಾಳೆಕೊಪ್ಪ | 12. | ಹೊನ್ನೇನಹಳ್ಳಿ (ಬೇ) |
| | | 13. | ಸೆಣಬನಹಳ್ಳಿ | 14. | ಹೂವಿನಕಟ್ಟೆ |
| 2. | 4-ನಲ್ಲೂರು | 1. | ನಲ್ಲೂರು | 2. | ಅನುಪನಕುಂಟೆ |
| | | 3. | ಮಲೆಮಾಚನಕುಂಟೆ | 4. | ಅಂತಾಪುರ |
| | | 5. | ರಂಗನಹಳ್ಳಿ | 6. | ಗಡಿಯಂಕನಹಳ್ಳಿ |
| | | 7. | ಬ್ಯಾಡನಕಟ್ಟೆ | 8. | ಸಾತೇನಹಳ್ಳಿ |
| | | 9. | ಸೂರೇಕಾಯಿ ಪೆಂಟೆ | 10. | ತೊಣಚನಹಳ್ಳಿ |
| | | 11. | ಮಾರನಹಳ್ಳಿ | 12. | ಕಲ್ಲುಗುಡಿ |
| 3. | 5-ಹೊಸಕೆರೆ | 1. | ಹೊಸಕೆರೆ | 2. | ವರ್ತಿಕಟ್ಟೆ |
| | | 3. | ಕೆಂಪನಹಳ್ಳಿ | 4. | ಹರೇಹಳ್ಳಿ |
| | | 5. | ಕರೇಗೊಂಡನಹಳ್ಳಿ | 6. | ಶಿವನೇಹಳ್ಳಿ |
| | | 7. | ತಿಮ್ಮಲಾಪುರ | 8. | ತೆವಡಿಹಳ್ಳಿ |
| | | 9. | ಪಿನ್ನೇನಹಳ್ಳಿ | 10. | ಜೋಗಿಹಳ್ಳಿ |
| | | 11. | ಸಂಗನಹಳ್ಳಿ | 12. | ಮಾದೇನಹಳ್ಳಿ |

| 1 | 2 | 3 | | | |
|---|---|---|---|---|---|
| 4. | 7-ಅಳಲಘಟ್ಟ | 1. | ಅಳಲಘಟ್ಟ | 2. | ಯರೇಕಾವಲು |
| | | 3. | ಮೂಡ್ಲಹಳ್ಳಿ | 4. | ಹುಚ್ಚಣ್ಣನಪಾಳ್ಯ (ಬೇ) |
| | | 5. | ಬೆಟ್ಟದಹಳ್ಳಿ | 6. | ಜಕ್ಕನಹಳ್ಳಿ |
| | | 7. | ಬೆಣೆಹಳ್ಳಿ | 8. | ಸಾಗಸಂದ್ರ |
| | | 9. | ಗ್ಯಾರೇಹಳ್ಳಿ | 10. | ಕಳಸನಹಳ್ಳಿ |
| | | 11. | ಬಂಡನಹಳ್ಳಿ | 12. | ಭೋಗಸಂದ್ರ |
| | | 13. | ಮುದ್ದನಹಳ್ಳಿ | 14. | ಹರದಗೆರೆ |
| | | 15. | ಈಚಲಕಾವಲು | | |
| 5. | 8-ಚೀಳೂರು | 1. | ಚೀಳೂರು | 2. | ಚೀಳೂರು ಅಮಾನಿಕೆರೆ |
| | | 3. | ಎಣ್ಣೇಕಟ್ಟೆ | 4. | ಕೊಡಿಯಾಲ |
| | | 5. | ಮೂಗನಹುಣಸೆ | 6. | ಸೀಗೇನಹಳ್ಳಿ |
| | | 7. | ಕಾಡಬೆಟ್ಟನಹಳ್ಳಿ | 8. | ಕೆಂಚನಹಳ್ಳಿ |
| 6. | 9-ಇರಕಸಂದ್ರ | 1. | ಇರಕಸಂದ್ರ | 2. | ಬೋರಗೊಂಡನಹಳ್ಳಿ |
| | | 3. | ಚಿಂದಿಗೆರೆ | 4. | ಮಣ್ಣೆ ಮಾರಿ ಅಮೃತಮಹಲ್ ಕಾವಲ್ |
| | | 5. | ಮಣ್ಣೆಮಾರಿ ನಗದಿಕಾವಲ್ | 6. | ಹರಿವೆಸಂದ್ರ |
| | | 7. | ಸಿ. ನಂದಿಹಳ್ಳಿ | 8. | ಪಟ್ರಾವತನಹಳ್ಳಿ |
| | | 9. | ಜಾಲಗುಣಿ | 10. | ಕಗ್ಗೆರೆ |
| | | 11. | ಕಾಟನಹಳ್ಳಿ | | |
| 7. | 10-ಬಿದರೆ | 1. | ಬಿದರೆ | 2. | ಬಿದರೆ ಅಮಾನಿಕೆರೆ |
| | | 3. | ಗೌರಿಪುರ | 4. | ಮಾದಾಪುರ |
| | | 5. | ಕೋಣನಕಲ್ಲು | 6. | ಗುಡ್ಡದಹಳ್ಳಿ |
| | | 7. | ನಿಂಬೆಕಟ್ಟೆ | 8. | ಕಾಶಿಮಠ |
| | | 9. | ಜೈನಿಗರಹಳ್ಳಿ | 10. | ಬಿದರೆ ರಾಜಕಾವಲ್ |
| | | 11. | ನಂಜುಂಡಪುರ | | |
| 8. | 11-ಮೂಗನಾಯಕನ ಕೋಟೆ | 1. | ಮೂಗನಾಯಕನ ಕೋಟೆ | 2. | ಮೂಗನಾಯಕನ ಕೋಟೆ ಅಮಾನಿಕೆರೆ |
| | | 3. | ಜೋಗಿಹಳ್ಳಿ | 4. | ವೀರಾಪುರ (ಬೇ) |
| | | 5. | ಬನ್ನಿಗಾನಹಳ್ಳಿ | 6. | ಹಲಸಿನ ನಾಗೇನಹಳ್ಳಿ |
| | | 7. | ಸಂಕಾಪುರ | 8. | ಎಂ. ಹೊಸಹಳ್ಳಿ |
| | | 9. | ಮತ್ತಿಕೆರೆ | 10. | ಇಡಕನಹಳ್ಳಿ |
| | | 11. | ಬಸವಾಪಟ್ಟಣ | 12. | ಕೋಡಿನಾಗೇನಹಳ್ಳಿ |
| | | 13. | ಸೋಮಲಾಪುರ | 14. | ಮಲ್ಲೇನಹಳ್ಳಿ |
| | | 15. | ಉದ್ದೆಹೊಸಕೆರೆ | | |
| 9. | 14-ದೊಡ್ಡಗುಣಿ | 1. | ದೊಡ್ಡಗುಣಿ | 2. | ತಗ್ಗಿಹಳ್ಳಿ |
| | | 3. | ಸೀಗೆಹಳ್ಳಿ | 4. | ದಿಂಡಿಗದಹಳ್ಳಿ |
| | | 5. | ನೇರಳೆಕೆರೆ | 6. | ವಿರೂಪಾಕ್ಷಿಪುರ |
| | | 7. | ಕಲ್ಲೇನಹಳ್ಳಿ | 8. | ಎನ್. ಹೊಸಹಳ್ಳಿ |
| | | 9. | ಹಂಡನಹಳ್ಳಿ | 10. | ಯಲ್ಲಾಪುರ |
| | | 11. | ರಾಜನಪೆಂಚೆ | 12. | ಹಿಂಡಿಗಾನ ಹಳ್ಳಿ |
| | | 13. | ಬೆಣೆ ಹಳ್ಳದ ಕಾವಲ್ (ಬೇ) | 14. | ಪೆರಮಸಂದ್ರ |
| | | 15. | ಬಡವನಪಾಳ್ಯ | 16. | ಕಂಚಿಗಾನಹಳ್ಳಿ |
| 10. | 15-ಮಾರಶೆಟ್ಟಿಹಳ್ಳಿ | 1. | ಮಾರಶೆಟ್ಟಿಹಳ್ಳಿ | 2. | ಕೋಡಿಮಲ್ಲೇನಹಳ್ಳಿ |
| | | 3. | ಬಾಡೇನಹಳ್ಳಿ | 4. | ಜನಕದೇವನಹಳ್ಳಿ |
| | | 5. | ಡಿ. ರಾಂಪುರ | 6. | ಅರಗುಲದೇವಿ ಗುಡ್ಡ ಕಾವಲ್ |
| | | 7. | ಚನ್ನವಡೇರಹಳ್ಳಿ | 8. | ಬಂಡಿಹಳ್ಳಿ |
| | | 9. | ಅಮ್ಮನಹಳ್ಳಿ | 10. | ಕುಂದರನಹಳ್ಳಿ |
| | | 11. | ಸೋಪನಹಳ್ಳಿ | 12. | ತಿಮ್ಮಳಿಪಾಳ್ಯ |
| | | 13. | ಬಿದರೆಹಳ್ಳ ಕಾವಲ್ | 14. | ಕಾರೇಹಳ್ಳಿ |
| | | 15. | ದೊಣ್ಣೆರೆ | 16. | ಕೆಂಚನಹಳ್ಳಿ |
| | | 17. | ಪಾರಸನಹಳ್ಳಿ | 18. | ಅತ್ತಿಕಟ್ಟೆ |
| | | 19. | ಬೆಣ್ಣೂರು | | |

| 1 | 2 | 3 | | | |
|---|---|---|---|---|---|
| 11. | 16-ನಿಟ್ಟೂರು | 1. | ನಿಟ್ಟೂರು | 2. | ಬಾಗೂರು |
| | | 3. | ಹೆಸರಹಳ್ಳಿ | 4. | ನಿಟ್ಟೂರು ಅಮಾನಿಕೆರೆ |
| | | 5. | ಬಾಬಿಗಾನಹಳ್ಳಿ | 6. | ಬೆಣಚಗೆರೆ |
| | | 7. | ಎನ್. ರಾಮಪುರ | 8. | ಅಂಕಾಪುರ |
| | | 9. | ಬೊಮ್ಮೇನಹಳ್ಳಿ | | |
| 12. | 17-ಅಮ್ಮನಘಟ್ಟ | 1. | ಅಮ್ಮನಘಟ್ಟ | 2. | ವರದೇನಹಳ್ಳಿ |
| | | 3. | ತಿಪ್ಪೂರು | 4. | ಹೊನ್ನವಳ್ಳಿ |
| | | 5. | ಚನ್ನಶೆಟ್ಟಿಹಳ್ಳಿ | 6. | ಜಿ. ಹರಿವೆಸಂದ್ರ |
| | | 7. | ಎನ್. ಮತ್ತಿಘಟ್ಟ | 8. | ಮದನಘಟ್ಟ |
| | | 9. | ಗೊಲ್ಲಹಳ್ಳಿ | | |
| 13. | 18-ಮೂಕನಹಳ್ಳಿ ಪಟ್ಟಣ | 1. | ಮೂಕನಹಳ್ಳಿ ಪಟ್ಟಣ | 2. | ಮೂಕನಹಳ್ಳಿ ಪಟ್ಟಣ ಅಮಾನಿಕೆರೆ |
| | | 3. | ಬಡಕನಪಾಳ್ಯ | 4. | ಮುದಿಗೆರೆ |
| | | 5. | ಬಿಳಿಕಲ್ಲಪಾಳ್ಯ | 6. | ದೊಡ್ಡನೆಟ್ ಕುಂಟೆ |
| | | 7. | ಬಿಸಲಹಳ್ಳಿ | 8. | ದೊಡ್ಡನೆಟ್ ಕುಂಟೆ ಅಮಾನಿಕೆರೆ |
| | | 9. | ಲಕ್ಕೇನಹಳ್ಳಿ | 10. | ಬೈಚೇನಹಳ್ಳಿ |
| | | 11. | ಚೌಕೇನಹಳ್ಳಿ | 12. | ಚಿಕ್ಕನೆಟ್‌ಕುಂಟೆ |
| | | 13. | ರಾಯವಾರ | | |
| 14. | 19-ಅಡಗೂರು | 1. | ಅಡಗೂರು | 2. | ಧೂಳನಹಳ್ಳಿ |
| | | 3. | ಕಳ್ಳಿಪಾಳ್ಯ | 4. | ಬಿಳಿಗೆರೆ |
| | | 5. | ಬಸ್ತಿಕಟ್ಟೆಕಾವಲ್ | 6. | ಪ್ರಭುವನಹಳ್ಳಿ |
| | | 7. | ಹಳೇಗುಬ್ಬಿ | 8. | ಗುಬ್ಬಿ ಅಮಾನಿಕೆರೆ |
| | | 9. | ಗುಬ್ಬಿ (ಗ್ರಾಮಾಂತರ) | 10. | ಸಿಂಗೋನಹಳ್ಳಿ |
| 15. | 20-ಹೇರೂರು | 1. | ಹೇರೂರು | 2. | ಚಿಕ್ಕೋನಹಳ್ಳಿ |
| | | 3. | ಕಿಟ್ಟದಕುಪ್ಪೆ | 4. | ಹೊದಲೂರು |
| | | 5. | ತೊರೆಹಳ್ಳಿ | | |
| 16. | 22-ಕಡಬ | 1. | ಕಡಬ | 2. | ಕಡಬ ಅಮಾನಿಕೆರೆ |
| | | 3. | ಆಡಗೊಂಡನಹಳ್ಳಿ | 4. | ಕಾಡಶೆಟ್ಟಿಹಳ್ಳಿ |
| | | 5. | ಗಂಗಸಂದ್ರ | 6. | ಕೊಮ್ಮನಹಳ್ಳಿ |
| | | 7. | ಕೆ. ರಾಂಪುರ | 8. | ಮಂಚಿಹಳ್ಳಿ |
| | | 9. | ಬ್ಯಾಡಗೆರೆ | 10. | ಗೊರ್ಜಿ ಹಳ್ಳಿ |
| | | 11. | ದಾಸರಕಲ್ಲಹಳ್ಳಿ | | |
| 17. | 24-ಜಿ.ಹೊಸಹಳ್ಳಿ | 1. | ಜಿ. ಹೊಸಹಳ್ಳಿ | 2. | ಬಿಕ್ಕೆಗುಡ್ಡಕಾವಲ್ |
| | | 3. | ಕಟ್ಟಿಗೇನಹಳ್ಳಿ (ಕಸಬಾ) | 4. | ಗೋಪಾಲಪುರ |
| | | 5. | ದೊಡ್ಡೇರಿ | 6. | ಮಡೇನಹಳ್ಳಿ |
| | | 7. | ಬ್ಯಾಡಗೆರೆ | 8. | ಮುದ್ದೇನಹಳ್ಳಿ |
| | | 9. | ಕಟ್ಟಿಗೇನಹಳ್ಳಿ (ಕಡಬಾ) | | |
| 18. | 25-ಕೊಡಗೀಹಳ್ಳಿ | 1. | ಕೊಡಗೀಹಳ್ಳಿ | 2. | ಸುರಿಗೇನಹಳ್ಳಿ ಕಾವಲ್ |
| | | 3. | ಗಳಗ | 4. | ನಾಗಸಂದ್ರ |
| | | 5. | ಕಾಳೇನಹಳ್ಳಿ | 6. | ಮಲ್ಲಪ್ಪನಹಳ್ಳಿ |
| | | 7. | ವಡ್ಡರಹಳ್ಳಿ | 8. | ಸುರಿಗೇನಹಳ್ಳಿ |
| 19. | 26-ಕುನ್ನಾಲ | 1. | ಕುನ್ನಾಲ | 2. | ಚಾಕೇನಹಳ್ಳಿ |
| | | 3. | ಯಲಚಿಹಳ್ಳಿ | 4. | ಲಿಂಗಮ್ಮನಹಳ್ಳಿ |
| | | 5. | ಜೀಗನಹಳ್ಳಿ | | |
| 20. | 28-ಕಲ್ಲೂರು | 1. | ಕಲ್ಲೂರು | 2. | ಬೆನಕನಗೊಂದಿ |
| | | 3. | ಕೆ. ಕೆಲ್ಲಹಳ್ಳಿ | 4. | ಬಿಳಿನಂದಿ |
| 21. | 29-ಹಿಂಡಿಸ್ಕೆರೆ | 1. | ಹಿಂಡಿಸ್ಕೆರೆ | 2. | ಹುಲ್ಲೇಕೆರೆ |
| | | 3. | ಹಿಂಡಿಸ್ಕೆರೆ ಕಾವಲ್ | 4. | ಚಾಮನಹಳ್ಳಿ |
| | | 5. | ಹರಿವೆಸಂದ್ರ ಕೆ. | 6. | ವಿ. ಕೋಡಿಹಳ್ಳಿ |
| | | 7. | ಕಂಬಸಂದ್ರ | 8. | ಪಡಗುಡಿ |
| | | 9. | ಬಿಟ್ಟಗೊಂಡನಹಳ್ಳಿ | 10. | ಬೇಲೂರು |
| | | 11. | ಕೆಂಚವೀರನಹಳ್ಳಿ | | |

| 1 | 2 | 3 | | | |
|---|---|---|---|---|---|
| 22. | 31-ಚಂದ್ರಶೇಖರಪುರ | 1. | ಚಂದ್ರಶೇಖರಪುರ | 2. | ಚಂದ್ರಶೇಖರಪುರ ಭಾಗಾಯ್ತು |
| | | 3. | ಚಂದ್ರಶೇಖರಪುರ ಅಮಾನಿಕೆರೆ | 4. | ಕೆಂಚನಹಳ್ಳಿ |
| | | 5. | ಊರುಕೆರೆ | 6. | ಕೊಡಗೀಹಳ್ಳಿ ಸಿ. |
| | | 7. | ಹುರಳಗೆರೆ | 8. | ಚಿಕ್ಕ ಎಡೆಯೂರು |
| | | 9. | ಜನ್ನೇನಹಳ್ಳಿ | | |

ಎಂ.ಬಿ. ದ್ಯಾಬೇರಿ

ಪಿ.ಆರ್. 1596 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/36/2004-05, ದಿನಾಂಕ: 16ನೇ ನವೆಂಬರ್ 2004**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕುಣಿಗಲ್ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 5000 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ 09 ಮತ್ತು 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 03 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 1 | 2 | 3 | | | |
| **5000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 1. | 3-ಬಾಗೇನಹಳ್ಳಿ | 1. | ಬಾಗೇನಹಳ್ಳಿ | 2. | ಸೊಬಗಾನಹಳ್ಳಿ |
| | | 3. | ಕೆಂಪಸಾಗರ | 4. | ಶೆಟ್ಟಿಗೆರೆ |
| | | 5. | ಶೆಟ್ಟಿಗೆರೆ ಚಾತುರ್ಭಾಗ | 6. | ಹೊನ್ನೇನಹಳ್ಳಿ |
| 2. | 6-ಬಿಳಿದೇವಾಲಯ | 1. | ಬಿಳಿದೇವಾಲಯ | 2. | ರಾಮಬಾಣ ಹಂತ (ಬೇ) |
| | | 3. | ಬೋರಲಿಂಗನಪಾಳ್ಯ | 4. | ಕೆಂಕೆರೆ |
| | | 5. | ಮುತ್ತುಗದಹಳ್ಳಿ | 6. | ಉರ್ಕೆಹಳ್ಳಿ |
| | | 7. | ಚೊಟ್ಟನಹಳ್ಳಿ | | |
| 3. | 7-ನೆಡೆಮಾವಿನಪುರ | 1. | ನಡೆಮಾವಿನಪುರ | 2. | ಕನ್ನಗುಣಿ |
| | | 3. | ಹಾಡೋನಹಳ್ಳಿ | 4. | ತುವ್ವೇಕೆರೆ |
| | | 5. | ಸಿದ್ಧಾಪುರ | | |
| 4. | 9-ಬೇಗೂರು | 1. | ಬೇಗೂರು | 2. | ಕೂತಾರಹಳ್ಳಿ |
| | | 3. | ಭೈರನಾಯಕನಹಳ್ಳಿ | 4. | ಗೊಟ್ಟಿಕೆರೆ |
| | | 5. | ಗೊಟ್ಟಿಕೆರೆ ಹಂತ (ಬೇ) | | |
| 5. | 10-ಟಿ.ಹೊಸಹಳ್ಳಿ | 1. | ಟಿ. ಹೊಸಹಳ್ಳಿ | 2. | ತರೀಕೆರೆ |
| | | 3. | ಯಾಚಘಟ್ಟ | 4. | ಬೋರಸಂದ್ರ |
| | | 5. | ದಾಸನಪುರ | 6. | ಅರಕೆರೆ |
| | | 7. | ಅರಕೆರೆ ಅಮಾನಿಕೆರೆ (ಬೇ) | 8. | ತೆಪ್ಪಸಂದ್ರ |
| 6. | 29-ಪಡುವಗೆರೆ | 1. | ಪಡುವಗೆರೆ | 2. | ಚಿಕ್ಕಜ್ಜನಹಳ್ಳಿ (ಬೇ) |
| | | 3. | ಬೆಟ್ಟಹಳ್ಳಿ | 4. | ಕಗ್ಗಲಾಪುರ |
| | | 5. | ವಳಗೆರೆಪುರ | 6. | ದೊಡ್ಡಕಲ್ಲಹಳ್ಳಿ |
| | | 7. | ಬೆನವಾರ | | |
| 7. | 31-ಮಾರ್ಕೋನಹಳ್ಳಿ | 1. | ಮಾರ್ಕೋನಹಳ್ಳಿ | 2. | ಹನುಮಾಪುರ |
| | | 3. | ಕಾಡಶೆಟ್ಟಿಹಳ್ಳಿ | 4. | ಬಿಸಿನೆಲೆ |
| | | 5. | ತೊರೆಹಳ್ಳಿ | 6. | ಮಂಟ್ಯ |
| | | 7. | ಚಿನ್ನಹಳ್ಳಿ | 8. | ಮಂಗಳ |
| | | 9. | ಕೊಡವತ್ತಿ | 10. | ಚಿಕ್ಕನಹಳ್ಳಿ |

| 1 | 2 | 3 | | | |
|---|---|---|---|---|---|
| | 31- ಮಾರ್ಕೋನಹಳ್ಳಿ | 11. | ಸುಣ್ಣದಪುರ (ಬೇ) | 12. | ತಗ್ಗಿಕುಪ್ಪೆ (ಬೇ) |
| | | 13. | ಕಿರಂಗೂರು | | |
| 8. | 34-ಕಗ್ಗೆರೆ | 1. | ಕಗ್ಗೆರೆ | 2. | ನಡೆಮಾವಿನಪುರ ಅಣೆಹಂತ (ಬೇ) |
| | | 3. | ನಡೆಮಾವಿನಪುರ ಅಮೃತ ಮಹಲ್‌ಕಾವಲ್ (ಬೇ) | 4. | ಅವರಗೆರೆ |
| | | 5. | ದಾಸನಪುರ | 6. | ಗೌಡಗೆರೆ |
| | | 7. | ಕಟ್ಟಿಗೆಹಳ್ಳಿ | 8. | ಚೊಟ್ನಹಳ್ಳಿ ಅಣೆ ಹಂತ (ಬೇ) |
| | | 9. | ಬಸವನ ಮತ್ತೀಕೆರೆ | 10. | ಕೆ. ಹುರುಳಿಬೋರಸಂದ್ರ |
| 9. | 35-ಕೊಪ್ಪ | 1. | ಕೊಪ್ಪ | 2. | ತಿಪ್ಪೂರು |
| | | 3. | ಶಿಂಗೋನಹಳ್ಳಿ | 4. | ಶಿಂಗೋನಹಳ್ಳಿ ಅಗ್ರಹಾರ (ಬೇ) |
| | | 5. | ಸೋಂಪುರ ಕಾವಲ್ (ಬೇ) | 6. | ವಡೇರಕಟ್ಟೆ ಕಾವಲ್ |
| | | 7. | ಬ್ಯಾಲದಕೆರೆ | 8. | ಕಂಠನಹಳ್ಳಿ |
| | | 9. | ಬ್ಯಾಡರಹಳ್ಳಿ | 10. | ಮನವಳ್ಳಿ |
| | | 11. | ಮಲ್ಲನಾಯ್ಕನಹಳ್ಳಿ | 12. | ಹುಲಿವಾನ |
| **7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 10. | 22-ಹುಲಿಯೂರುದುರ್ಗ | 1. | ಹುಲಿಯೂರುದುರ್ಗ | 2. | ಲಕ್ಕಶೆಟ್ಟಿಪುರ |
| | | 3. | ಕಂಪಲಾಪುರ | | |
| 11. | 33-ಯಡಿಯೂರು | 1. | ಯಡಿಯೂರು | 2. | ಹೊಸಹಳ್ಳಿ |
| | | 3. | ಬೀರಗಾನಹಳ್ಳಿ | 4. | ಚಾಕೇನಹಳ್ಳಿ |
| | | 5. | ಕಿತ್ತಾಘಟ್ಟ | 6. | ವೈ. ಹಂಪಾಪುರ |
| | | 7. | ರಾಗಿಹಳ್ಳಿ | 8. | ಕಾಚೇನಹಳ್ಳಿ |
| | | 9. | ಕುರುಬರಶೆಟ್ಟಿಹಳ್ಳಿ | 10. | ಹೊಸೂರು |
| | | 11. | ದೊಡ್ಡಮಧುರೆ | 12. | ಚಿಕ್ಕಮಧುರೆ |
| | | 13. | ಕೋಡಿಪಾಳ್ಯ | 14. | ಶಿಂಗಟಿಹಳ್ಳಿ |
| | | 15. | ಜಲದಗೆರೆ | 16. | ತಟ್ಟೆಕೆರೆ |
| | | 17. | ಗೊಟ್ಟಿಕೆರೆ | 18. | ಶೇಷಾಪುರ (ಬೇ) |
| 12. | 36-ನಾಗಸಂದ್ರ | 1. | ನಾಗಸಂದ್ರ | 2. | ಕಂಟನಹಳ್ಳಿ ಮಾವಿನಹಳ್ಳಿ ಅಮಾನಿಕೆರೆ |
| | | 3. | ದೇವರಕನ್ನಸಂದ್ರ | 4. | ಮಾವಿನಹಳ್ಳಿ |
| | | 5. | ಹುರುಳಗೆರೆ | 6. | ಹುಲಿಪುರ |
| | | 7. | ಕಂಚಗಾಲಪುರ | 8. | ಯಲ್ಲಾಪುರ |
| | | 9. | ಅಳಲಾಪುರ (ಬೇ) | 10. | ಎಂ. ಹುರುಳಿ ಬೋರಸಂದ್ರ |
| | | 11. | ಕೋಟಿಕೆರೆ | 12. | ಹೆಡ್ಡಿಗೆರೆ |
| | | 13. | ಜಿಡ್ಡಿಗೆರೆ | 14. | ಕೆ. ಹಂಪಾಪುರ (ಬೇ) |
| | | 15. | ಚೊಟ್ನಹಳ್ಳಿ | 16. | ವಗರಗೆರೆ |
| | | 17. | ಮಧುರೆಕಾವಲ್ | 18. | ಶೆಟ್ಟಿಬೀಡು |
| | | 19. | ತುರುಗನೂರು | | |

**ಎಂ.ಬಿ. ದ್ಯಾಬೇರಿ**

ಪಿ.ಆರ್. 1597 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

### ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/37/2004-05, ದಿನಾಂಕ: 16ನೇ ನವೆಂಬರ್ 2004

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ತಿಪಟೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 5000 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ 04 ಮತ್ತು 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 06 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

ಅನುಬಂಧ

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 5000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು | | | | | |
| 1. | 10-ಕುಪ್ಪಾಳು | 1. | ಕುಪ್ಪಾಳು | 2. | ಬಳ್ಳೇಕಟ್ಟೆ |
| | | 3. | ಕೊಂಡ್ಲಿಘಟ್ಟ | 4. | ಕಟ್ಟೆಹಳ್ಳಿ |
| | | 5. | ಶಿವಪುರ | 6. | ಗಿಣಕಿಕೆರೆ |
| | | 7. | ಕೊಟ್ಟಿಗೆಹಳ್ಳಿ | 8. | ಕರಡಾಳು |
| | | 9. | ಕಾಡಶೆಟ್ಟಿಹಳ್ಳಿ | 10. | ಉಪ್ಪಿನಹಳ್ಳಿ |
| 2. | 11-ಅರಳಗುಪ್ಪೆ | 1. | ಅರಳಗುಪ್ಪೆ | 2. | ಅಯರಹಳ್ಳಿ |
| | | 3. | ಈರನಕಲ್ ಕಾವಲ್ | 4. | ಕಲ್ಲುಶೆಟ್ಟಿಹಳ್ಳಿ |
| | | 5. | ಮದ್ಲೇಹಳ್ಳಿ | 6. | ಮಲ್ಲೇನಹಳ್ಳಿ |
| | | 7. | ಭೈರಾಪುರ | | |
| 3. | 14-ಈಚನೂರು | 1. | ಈಚನೂರು | 2. | ಹುಲ್ಲುಕಟ್ಟೆ |
| | | 3. | ಈಚನೂರು ಕಾವಲ್ | 4. | ಕೋಡಿಹಳ್ಳಿ |
| | | 5. | ಶಾಂತನಹಳ್ಳಿ | 6. | ಕೊಪ್ಪ |
| 4. | 26-ಗುಂಗುರುಮಳೆ | 1. | ಗುಂಗುರುಮಳೆ | 2. | ಕಲ್ಲಹಳ್ಳಿ |
| | | 3. | ಕಬ್ಬಳ್ಳಿಕಾವಲ್-ಬಿ | 4. | ಜಿ. ಮಲ್ಲೇನಹಳ್ಳಿ |
| | | 5. | ಕಸವನಹಳ್ಳಿ | 6. | ಕಸವನಹಳ್ಳಿ ಕಾವಲ್ |
| | | 7. | ಮಾರಗೊಂಡನಹಳ್ಳಿ | 8. | ಮಾದಿಹಳ್ಳಿ |
| | | 9. | ಬಿದರೆಕೆರೆ | | |
| 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು | | | | | |
| 5. | 1-ಬಳುವನೇರಳು | 1. | ಬಳುವನೇರಳು | 2. | ಮಲ್ಲಿದೇವಿಹಳ್ಳಿ |
| | | 3. | ವಡೇರಹಳ್ಳಿ | 4. | ಹೂಲೀಹಳ್ಳಿ |
| | | 5. | ಮುದ್ದೇನಹಳ್ಳಿ | 6. | ಸೂರಗೊಂಡನಹಳ್ಳಿ |
| | | 7. | ರುದ್ರಾಪುರ | 8. | ಗೌಡನಕಟ್ಟೆ |
| | | 9. | ರಂಗಾಪುರ | 10. | ಬೊಮ್ಮೇನಹಳ್ಳಿ |
| | | 11. | ಹೊಸಹಳ್ಳಿ | 12. | ದಾಸನಕಟ್ಟೆ |
| 6. | 8-ಹುಚ್ಚಗೊಂಡನಹಳ್ಳಿ | 1. | ಹುಚ್ಚಗೊಂಡನಹಳ್ಳಿ | 2. | ಚಿಕ್ಕಮಾರ್ಪನಹಳ್ಳಿ |
| | | 3. | ಈರ್ಲಗೆರೆ | 4. | ದೊಡ್ಡಮಾರ್ಪನಹಳ್ಳಿ |
| | | 5. | ಬೆನ್ನಾಯಕನಹಳ್ಳಿ | 6. | ಕೋಟನಾಯಕನಹಳ್ಳಿ |
| | | 7. | ಹಿಂಡಿಸ್ಕೆರೆ | 8. | ಈಡೇನಹಳ್ಳಿ |
| | | 9. | ರಾಮಶೆಟ್ಟಿಹಳ್ಳಿ | | |
| 7. | 12-ಬಿಳಿಗೆರೆ | 1. | ಬಿಳಿಗೆರೆ | 2. | ಚಿಕ್ಕನಹಳ್ಳಿ |
| | | 3. | ತಿಮ್ಮಲಾಪುರ | 4. | ಚೌಡ್ಲಾಪುರ |
| | | 5. | ಕಿಬ್ಬನಹಳ್ಳಿ | 6. | ಗಡಬನಹಳ್ಳಿ |
| | | 7. | ಹಟ್ನ | 8. | ಬದನೆಕಟ್ಟೆ |
| 8. | 15-ಮತ್ತಿಹಳ್ಳಿ | 1. | ಮತ್ತಿಹಳ್ಳಿ | 2. | ಮಡೇನೂರು |
| | | 3. | ಹಿರೇಬಿದರೆ | 4. | ಕರಿಕೆರೆ |
| | | 5. | ಸಿದ್ಧಾಪುರ | 6. | ಕೊನೆಹಳ್ಳಿ |
| | | 7. | ತಿಮ್ಲಾಪುರ | 8. | ಮಾದಿಹಳ್ಳಿ |
| | | 9. | ಕಂಚಾಘಟ್ಟ ಗೊಲ್ಲರಹಟ್ಟಿ + ಟಿ.ಎಂ. ಮಂಜುನಾಥನಗರ | | |
| 9. | 19-ನಾಗರಘಟ್ಟ | 1. | ನಾಗರಘಟ್ಟ | 2. | ಎನ್. ಮೇಲನಹಳ್ಳಿ |
| | | 3. | ಬೋಚಿಹಳ್ಳಿ | 4. | ಹೊನ್ನೇನಹಳ್ಳಿ |
| | | 5. | ನಾಗರಘಟ್ಟ ಕಾವಲ್ | 6. | ಬೆಳಗರಹಳ್ಳಿ |
| | | 7. | ಹೆಡಗರಹಳ್ಳಿ | 8. | ಕನ್ನೂಘಟ್ಟ |
| | | 9. | ಕೈದಾಳ | 10. | ಕುರುಬರ ಮಲ್ಲೇನಹಳ್ಳಿ |

| 1 | 2 | 3 | | | |
|---|---|---|---|---|---|
| | 19-ನಾಗರ ಘಟ್ಟ | 11. | ಶಕುನಗಿರಿ ಗೊಲ್ಲರಹಟ್ಟಿ | 12. | ಕೋಡಿಹಳ್ಳಿ |
| | | 13. | ಹಾರೋಘಟ್ಟ | | |
| 10. | 21-ನೊಣವಿನಕೆರೆ | 1. | ನೊಣವಿನಕೆರೆ | 2. | ಆಲ್ಲೂರು |
| | | 3. | ಮಾಕನಹಳ್ಳಿ | | |

ಎಂ.ಬಿ. ದ್ಯಾಬೇರಿ

ಪಿ.ಆರ್. 1598 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/38/2004-05, ದಿನಾಂಕ: 16ನೇ ನವೆಂಬರ್ 2004**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಚಿಕ್ಕನಾಯಕನಹಳ್ಳಿ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 5000 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ 02 ಮತ್ತು 7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ 08 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| 1 | 2 | 3 | | | |
| **5000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 1. | 23-ದುಗುಡಿಹಳ್ಳಿ | 1. | ದುಗುಡಿಹಳ್ಳಿ | 2. | ಸಿದ್ಧರಾಮನಗರ |
| | | 3. | ಕೊಡಲಾಗರ | 4. | ಬೇಟೆ ರಂಗನಹಳ್ಳಿ |
| | | 5. | ಚುಂಗನಹಳ್ಳಿ | 6. | ವಡೇರಹಳ್ಳಿ |
| | | 7. | ಬಲ್ಲೇನಹಳ್ಳಿ | 8. | ಬಾಚಿಹಳ್ಳಿ |
| | | 9. | ಹೆಸರಹಳ್ಳಿ | 10. | ಗೌಡನಹಳ್ಳಿ |
| | | 11. | ಕಾರೇಹಳ್ಳಿ | | |
| 2. | 25-ಹೊನ್ನೇಬಾಗಿ | 1. | ಹೊನ್ನೇಬಾಗಿ | 2. | ಬುಳ್ಳೇನಹಳ್ಳಿ |
| | | 3. | ಗೊಲ್ಲರಹಳ್ಳಿ | 4. | ಕಾಡೇನಹಳ್ಳಿ |
| | | 5. | ಭಾವನಹಳ್ಳಿ | 6. | ಹೊಸಹಳ್ಳಿ |
| | | 7. | ಚಿಕ್ಕನಾಯಕನಹಳ್ಳಿ (ಗ್ರಾ) | 8. | ಕೋಡಿಹಳ್ಳಿ |
| | | 9. | ಚನ್ನೇನಹಳ್ಳಿ | 10. | ಭಾಗಾಯ್ತು |
| | | 11. | ದಾಸಿಹಳ್ಳಿ | 12. | ಮೇಲನಹಳ್ಳಿ |
| | | 13. | ಮಾರಸಂದ್ರ | 14. | ಚಿಕ್ಕೇನಹಳ್ಳಿ |
| | | 15. | ಕಾಟೇನಹಳ್ಳಿ | | |
| **7000 ಕ್ಕಿಂತ ಜಾಸ್ತಿ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 3. | 1-ದಸೂಡಿ | 1. | ದಸೂಡಿ | 2. | ಮರೇನಡು |
| | | 3. | ದಬ್ಬಗುಂಟೆ | | |
| 4. | 2-ಹೊಯ್ಸಳಕಟ್ಟೆ | 1. | ಹೊಯ್ಸಳಕಟ್ಟೆ | 2. | ಬೋರನಕಣಿವೆ |
| | | 3. | ಬೆಳ್ಳಾರ | 4. | ಕಲ್ಲೇನಹಳ್ಳಿ |
| | | 5. | ಮಲೇನೂರು | 6. | ಮುತ್ತುಗದಹಳ್ಳಿ |
| | | 7. | ಅಂಬಾರಪುರ | 8. | ಲಕ್ಕೇನಹಳ್ಳಿ |
| 5. | 3-ಗಾಣದಾಳು | 1. | ಗಾಣದಾಳು | 2. | ಸೋಮನಹಳ್ಳಿ |
| | | 3. | ಗುರುವಾಪುರ | 4. | ಹೆಚ್. ಮೇಲನಹಳ್ಳಿ |
| | | 5. | ಯಗಚಿಹಳ್ಳಿ | 6. | ಮಾರುಹೊಳೆ |
| | | 7. | ಕಂಪನಹಳ್ಳಿ | 8. | ಕುರಿಹಟ್ಟಿ |
| | | 9. | ಕಾರೇಹಳ್ಳಿ | | |

| 1 | 2 | 3 | | | |
|---|---|---|---|---|---|
| 6. | 5-ಹುಳಿಯಾರು | 1. | ಹುಳಿಯಾರು | 2. | ಹುಳಿಯಾರು ಅಮಾನಿಕೆರೆ |
| | | 3. | ಕೇಶವಾಪುರ | 4. | ವಳಗೇರಹಳ್ಳಿ |
| 7. | 8-ದೊಡ್ಡ ಎಣ್ಣೆಗೆರೆ | 1. | ದೊಡ್ಡ ಎಣ್ಣೆಗೆರೆ | 2. | ಚಿಕ್ಕ ಎಣ್ಣೆಗೆರೆ |
| | | 3. | ನಡುವನಹಳ್ಳಿ | 4. | ಚೋರಗೊಂಡನಹಳ್ಳಿ |
| | | 5. | ಬೊಮ್ಮೇನಹಳ್ಳಿ | 6. | ದೊಡ್ಡ ಹುಲ್ಲೇನಹಳ್ಳಿ |
| | | 7. | ಬನ್ನೀಕೆರೆ | 8. | ಹೆಚ್.ಎಂ. ಕಾವಲ್ |
| 8. | 9-ಹಂದನಕೆರೆ | 1. | ಹಂದನಕೆರೆ | 2. | ಹಳ್ಳಿ ತಿಮ್ಲಾಪುರ |
| | | 3. | ರಾಮಘಟ್ಟ | 4. | ಪುರದಕಟ್ಟೆ |
| | | 5. | ಹುಚ್ಚನಹಳ್ಳಿ | 6. | ಕೆಂಗಲಾಪುರ |
| 9. | 14-ತಿಮ್ಮನಹಳ್ಳಿ | 1. | ತಿಮ್ಮನಹಳ್ಳಿ | 2. | ಚಿಕ್ಕಬೆಳವಾಡಿ |
| | | 3. | ಬಡಕೆಗುಡ್ಲು | 4. | ಮೈಲುಕಬ್ಬೆ |
| | | 5. | ಹುಲ್ಲೇನಹಳ್ಳಿ (ಬೇ) | | |
| 10. | 24-ಮುದ್ದೇನಹಳ್ಳಿ | 1. | ಮುದ್ದೇನಹಳ್ಳಿ | 2. | ಲಕ್ಕೇನಹಳ್ಳಿ |
| | | 3. | ಸಾಲ್ಕಟ್ಟೆ | 4. | ಮರಳು ಹಳ್ಳದ ಕಾವಲ್ |
| | | 5. | ಆಲದಕಟ್ಟೆ | 6. | ಶ್ಯಾವಿಗೆಹಳ್ಳಿ |
| | | 7. | ತೊನ್ನಲಾಪುರ | 8. | ಮಾಳಿಗೆಹಳ್ಳಿ |
| | | 9. | ಬ್ಯಾಲಕೆರೆ | 10. | ಸಾವಶೆಟ್ಟಿಹಳ್ಳಿ |
| | | 11. | ಜೋಡಿಕಲ್ಲೇನಹಳ್ಳಿ | 12. | ಪಿನ್ನೇನಹಳ್ಳಿ |

ಎಂ.ಬಿ. ದ್ಯಾಬೇರಿ

ಪಿ.ಆರ್. 1599 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಅಧಿಸೂಚನೆ ಕ್ರಮಾಂಕ: ಗ್ರಾಪಂ/ಚು/ವಿವ/39/2004-05, ದಿನಾಂಕ: 16ನೇ ನವೆಂಬರ್ 2004**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 4 ಉಪ ಪ್ರಕರಣ (1) ರನ್ವಯ 1991ರ ಜನಗಣತಿಯ ಆಧಾರದ ಮೇಲೆ ಗ್ರಾಮದಲ್ಲಿ ಅಥವಾ ಗ್ರಾಮಗಳ ಗುಂಪು ಒಳಗೊಂಡಿರುವ ಪ್ರದೇಶವು 2001ನೇ ಜನಗಣತಿಯನ್ವಯ ಗ್ರಾಮದ ಜನಸಂಖ್ಯೆಯ ಬದಲಾವಣೆ ಆಗುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 41 ಗ್ರಾಪಸ 2004 ದಿನಾಂಕ: 7.10.2004 ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993 ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ (1)ನೇ ಉಪ ಪ್ರಕರಣದ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಂ.ಬಿ. ದ್ಯಾಬೇರಿ ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ತುರುವೇಕೆರೆ ತಾಲ್ಲೂಕಿಗೆ ಸಂಬಂಧಿಸಿದಂತೆ ಹಾಲಿ ಅಸ್ತಿತ್ವದಲ್ಲಿರುವ ಒಟ್ಟು ಗ್ರಾಮಪಂಚಾಯಿತಿಗಳಲ್ಲಿ 7000 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ 2 ಗ್ರಾಮಪಂಚಾಯಿತಿಗಳಲ್ಲಿ ಸಂಖ್ಯೆ/ ಗಡಿ (ಬೌಂಡರಿ) ಗಳಲ್ಲಿ ಯಾವುದೇ ರೀತಿ ಬದಲಾವಣೆ ಮಾಡದೆ ಈ ಕೆಳಕಂಡ ಅನುಬಂಧದ ಅಂಕಣ (3) ರಲ್ಲಿ ನಿರ್ದಿಷ್ಟಪಡಿಸಿರುವ ಗ್ರಾಮಗಳ ಸಮೂಹವನ್ನು ಗ್ರಾಮಪಂಚಾಯಿತಿ ಪ್ರದೇಶವೆಂದು ಘೋಷಿಸುತ್ತಾ, ಅದರ ಕೇಂದ್ರಸ್ಥಾನವನ್ನು ಅದಕ್ಕೆ ಸಂಬಂಧಿಸಿದ ಅಂಕಣ (2)ರಲ್ಲಿ ನಿರ್ದಿಷ್ಟಪಡಿಸಿರುವುದಾಗಿರುತ್ತದೆಂದು ಘೋಷಿಸಿರುತ್ತೇನೆ.

**ಅನುಬಂಧ**

| ಕ್ರ. ಸಂ. | ಗ್ರಾಮಪಂಚಾಯಿತಿ ಕೇಂದ್ರ ಸ್ಥಾನ | ಗ್ರಾಮಪಂಚಾಯಿತಿಯಾಗಿ ನಿಯೋಜಿಸಿ ಘೋಷಿಸಲಾಗಿರುವ ಗ್ರಾಮ / ಗ್ರಾಮಗಳ ಸಮೂಹ | | | |
|---|---|---|---|---|---|
| **7000ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮಪಂಚಾಯಿತಿಗಳು** | | | | | |
| 1. | 1-ಅಮ್ಮಸಂದ್ರರೂರಲ್ | 1. | ಅಮ್ಮಸಂದ್ರ ರೂರಲ್ | 2. | ಚಾಕುವಳ್ಳಿ |
| | | 3. | ಹೊನ್ನೇನಹಳ್ಳಿ | 4. | ಡಿ. ಹೊಸಹಳ್ಳಿ |
| | | 5. | ಹಡವನಹಳ್ಳಿ | 6. | ಗಿರಿಯನಹಳ್ಳಿ |
| | | 7. | ಮಾರಸಂದ್ರ | 8. | ಹೆಗ್ಗೆರೆ |
| | | 9. | ಅಪ್ಪಸಂದ್ರ | 10. | ಆದಿತ್ಯ ಪಟ್ಟಣ |
| 2. | 2-ಬಾಣಸಂದ್ರ | 1. | ಬಾಣಸಂದ್ರ | 2. | ಬೊಮ್ಮೇನಹಳ್ಳಿ |
| | | 3. | ಎ. ಹೊಸಹಳ್ಳಿ | 4. | ಸೋಮಲಾಪುರ |
| | | 5. | ಗುಳದಹಳ್ಳಿ | 6. | ಬುಗುಡನಹಳ್ಳಿ |
| | | 7. | ಕುಣಿಕೇನಹಳ್ಳಿ | 8. | ಬಲಮಾದಿಹಳ್ಳಿ |
| | | 9. | ಹುಳಿಸಂದ್ರ | | |

ಎಂ.ಬಿ. ದ್ಯಾಬೇರಿ

ಪಿ.ಆರ್. 1600 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ.

## ಪ್ರಧಾನ ದಿವಾಣಿ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ

**ಸಿ.ಸಿ. 217/2003 ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ವಾರಸುದಾರರಿಲ್ಲದ ವಾಹನವನ್ನು ಚಿಕ್ಕಬಳ್ಳಾಪುರ ಗ್ರಾಮಾಂತರ ಆರಕ್ಷಕರು ವಶಪಡಿಸಿಕೊಂಡು, ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಯಾವುದೇ ಹಕ್ಕು ಬಾಧ್ಯತೆಗಳನ್ನು ರುಜುವಾತುಪಡಿಸದಿದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿರುವ ವಾಹನದ ಮಾಲೀಕತ್ವದ ಮೂಲ ದಾಖಲಾತಿಗಳೊಂದಿಗೆ ಈ ಪ್ರಕಟಣೆ ಪ್ರಕಟವಾದ 30 ದಿವಸಗಳೊಳಗಾಗಿ ಈ ನ್ಯಾಯಾಲಯದ ಮುಂದೆ ರುಜುವಾತುಪಡಿಸುವುದು. ನಿಗದಿತ ಅವಧಿಯ ನಂತರ ಬಂದ ಯಾವುದೇ ಅಹವಾಲನ್ನು ಪರಿಗಣಿಸಲಾಗುವುದಿಲ್ಲ.

| ಕ್ರ. ಸಂ. | ಮು.ಮಾ.ಸಂ. | ನೊಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸ್ಸಿ ನಂಬರ್ |
|---|---|---|---|---|
| 1. | ಪಿ.ಆರ್. ನಂಬರ್. 23/2004 | ಒಂದು ಟಿವಿಎಸ್ ಎಕ್ಸ್‌ಎಲ್ ಮೋಪೆಡ್ ಸಂಖ್ಯೆ 7575 | 031925 | 031684 |

**ಎಸ್. ನಾಗಶ್ರೀ**

ಪಿ.ಆರ್. 1575 ಪ್ರಧಾನ ದಿವಾಣಿ ನ್ಯಾಯಾಧೀಶರು (ಕಿ.ವಿ.) ಮತ್ತು ಜೆಎಂಎಫ್‌ಸಿ, ಚಿಕ್ಕಬಳ್ಳಾಪುರ.

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ತೆರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಕೆಎ-11:2371 (ಭಾರಿ ಸರಕು ವಾಹನ) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲೀಕರಾದ ಶ್ರೀ ಎಲ್. ವಾಹಾಬ್ ಜಾನ್, ಬಿನ್ ಲತೀಫ್‌ಸಾಬ್, ಕೆಎಂ ರಸ್ತೆ, ಕಡೂರು ರವರ ಅರ್ಜಿ ದಿ.14.9.2004.

**ಪ್ರಸ್ತಾವನೆ:**

ಈ ಕಛೇರಿಯಲ್ಲಿ ನೋಂದಾಯಿಸಲ್ಪಟ್ಟ ವಾಹನ ಸಂಖ್ಯೆ ಕೆಎ-11:2371 ಭಾರಿ ಸರಕು ವಾಹನದ ಮಾಲೀಕರಾದ ಶ್ರೀ ಎಲ್. ವಾಹಬ್‌ಜಾನ್, ಕೆ.ಎಂ. ರಸ್ತೆ, ಕಡೂರುರವರು ಕಛೇರಿಗೆ ದಿನಾಂಕ:14.9.2004 ರಂದು ಸದರಿ ವಾಹನದ ಎಲ್ಲಾ ದಾಖಲೆ ಪತ್ರಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಮೇಜರ್ ದುರಸ್ಥಿಗೆ ಬಂದಿದ್ದು ಬಿಡಿಭಾಗಗಳು ಸಿಗತ್ತಿಲ್ಲವೆಂದು (1985 ಮಾಡೆಲ್) ಹಾಗೂ ದುರಸ್ಥಿ ಕಾರ್ಯ ದುಬಾರಿ ಆಗಿರುವುದರಿಂದ ಈ ವಾಹನವನ್ನು ಸ್ಕ್ರಾಪ್ ಮಾಡುವುದಾಗಿ ತಿಳಿಸಿ ನೋಂದಣಿ ರದ್ದುಪಡಿಸಿ ನೀಡಲು ಕೋರಿರುತ್ತಾರೆ. ಈ ಕಛೇರಿ ದಾಖಲೆಯ ಪರಿಶೀಲನೆಯಿಂದ ಈ ವಾಹನದ ತೆರಿಗೆ 30.9.2004 ರವರೆಗೆ ಪಾವತಿಸಿರುವುದು ಕಂಡುಬಂದಿದ್ದು ಮಾಲೀಕರ ಕೋರಿಕೆಯಂತೆ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಚಿಮ:ನೋಂದಣಿ:ಎಫ್‌ಟಿ:ಟಿ:ಕೆಎ11:2371:04-05, ದಿನಾಂಕ: 23ನೇ ಸೆಪ್ಟೆಂಬರ್ 2004**

ಕೇಂದ್ರ ಮೋಟಾರು ವಾಹನಗಳ ಕಾಯಿದೆ 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ಕೆಎ-11:2371 (ಭಾರಿ ಸರಕು ವಾಹನ) ವಾಹನದ ನೋಂದಣಿ ಪತ್ರವನ್ನು, ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿಗಳೇನಾದರೂ ಕಂಡುಬಂದಲ್ಲಿ ವಾಹನ ಮಾಲೀಕರು ಪಾವತಿಸಬೇಕೆಂಬ ಷರತ್ತಿನ ಮೇಲೆ ನೋಂದಣಿಯನ್ನು ದಿನಾಂಕ: 23.9.2004ರಿಂದ ಅನ್ವಯಿಸುವಂತೆ ರದ್ದುಪಡಿಸಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1. | ವಾಹನ ಸಂಖ್ಯೆ | : | ಕೆಎ-11:2371 |
| 2. | ವಾಹನದ ವರ್ಗ | : | ಭಾರಿ ಸರಕು ವಾಹನ (ಟಾಟಾ ತಯಾರಿಕೆ) |
| 3. | ನೋಂದಣಿ ದಿನಾಂಕ | : | 17-10-1985 |
| 4. | ಚಾಸೀ ಸಂಖ್ಯೆ | : | ಸಿಹೆಚ್00175:ಪಿಇಎನ್:89 |
| 5. | ಎಂಜಿನ್ ಸಂಖ್ಯೆ | : | 692ಡಿ02207:477 |
| 6. | ಮಾಡೆಲ್ | : | 1985 |
| 7. | ತೆರಿಗೆ | : | 30.9.2004 |
| 8. | ಕಂತು ಕೊಳ್ಳಾಟ | : | ಇರುವುದಿಲ್ಲ. |
| 9. | ಮಾಲೀಕರು | : | ಶ್ರೀ ಎಲ್. ವಾಹಬ್‌ಸಾಬ್, ಬಿನ್ ಲತೀಫ್ ಸಾಬ್, ಕೆ.ಎಂ. ರಸ್ತೆ, ವಿ.ಕೆ. ಕಾಲೋನಿ, ಕಡೂರು. |

**ಆರ್. ರಾಜಶೇಖರ್**

ಪಿ.ಆರ್. 1576 ನೋಂದಣಿ ಪ್ರಾಧಿಕಾರ ಹಾಗೂ ಪ್ರಾಧಿಕಾರ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು.

## ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ ಬೆಂಗಳೂರು, ಇವರ ನಡವಳಿಕೆಗಳು

**ಸಂಖ್ಯೆ:ಆರ್‌ಸಿಎಸ್/ಎಲ್‌ಕ್ಯೂಡಿ/36/2003-04, ದಿನಾಂಕ: 6ನೇ ನವೆಂಬರ್ 2004**

**ವಿಷಯ:** ಅಗರಬತ್ತಿ ವರ್ಕರ್ಸ್ ಅಂಡ್ ಅದರ್ಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸ.ಸಂ.ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರ ಪ್ರಸ್ತಾವೆ ಸಂ.ಜೆಆರ್‌ಬಿ-1/ಸಮಾಪನೆ/ಹೆಚ್‌ಎಸ್‌ಬಿ/2003-04, ದಿನಾಂಕ: 2.5.2004.
2. ಸರ್ಕಾರದ ಪತ್ರ ಸಂ.ಸಿಎಂಡಬ್ಲ್ಯೂ/102/ಸಿಹೆಚ್‌ಎಸ್/ 2003, ದಿನಾಂಕ 19.11.2003.
3. ಸರ್ಕಾರದ ಪತ್ರ ಸಂ.ಸಿಎಂಡಬ್ಲ್ಯೂ/102/ಸಿಹೆಚ್‌ಎಸ್/ 2003, ದಿನಾಂಕ 4.10.2004.
4. ಈ ಕಛೇರಿಯ ಇದೇ ಕ್ರಮಾಂಕದ ಕಾರಣ ಕೇಳುವ ನೋಟೀಸಿನ ದಿನಾಂಕ 17.2.2004.

**ಪ್ರಸ್ತಾವನೆ:**

ಅಗರಬತ್ತಿ ವರ್ಕರ್ಸ್ ಅಂಡ್ ಅದರ್ಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಈ ಸಹಕಾರ ಸಂಘದಲ್ಲಿ ಹಲವಾರು ಅವ್ಯವಹಾರಗಳು ನಡೆದು ಆಡಳಿತ ಮಂಡಳಿಯು ಸಮರ್ಪಕವಾಗಿ ಕಾರ್ಯನಿರ್ವಹಿಸದ ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 65 ರಡಿ ಪರಿವೀಕ್ಷಣೆಯನ್ನು ನಡೆಸಲಾಗಿದ್ದು, ಹಾಗೂ ಸಂಘದ ಸದಸ್ಯರು ಸಲ್ಲಿಸಿದ್ದ ದೂರು ಅರ್ಜಿ ವಿಚಾರಣೆ ನಡೆಸಲಾಗಿದ್ದು, ಈ ಪರಿವೀಕ್ಷಣಾ ಮತ್ತು ಅರ್ಜಿ ವಿಚಾರಣಾ ವರದಿಗಳಿಂದ ಸಾಬೀತಾಗಿರುವಂತೆ ಈ ಸಂಘವು ಯಾವ ಉದ್ದೇಶಕ್ಕಾಗಿ ಸ್ಥಾಪನೆಯಾಗಿತ್ತೋ ಆ ಉದ್ದೇಶಗಳನ್ನು ಈಡೇರಿಸುವಲ್ಲಿ ವಿಫಲವಾಗಿರುತ್ತದೆಂದು ಉಲ್ಲೇಖ (1) ರಲ್ಲಿರುವ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ ಇವರು ಪ್ರಸ್ತಾವದಲ್ಲಿ ವರದಿ ಸಲ್ಲಿಸಿ, ಸದರಿ ಸಂಘವನ್ನು ಕಾಯ್ದೆ ಕಲಂ 72 ರಂತೆ ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿ ಆಡಳಿತ ಮಂಡಳಿ ವಿರುದ್ಧ ಈ ಕೆಳಕಂಡ ಆರೋಪ ಪಟ್ಟಿಯನ್ನು ಸಲ್ಲಿಸಿರುತ್ತಾರೆ.

**ಆರೋಪ-1:-** ಸಂಘವು ಅದರ ಉಪನಿಯಮ 4 ರಲ್ಲಿ ನಮೂದಿಸಿರುವ ಪ್ರಮುಖವಾದ ಉದ್ದೇಶಗಳನ್ನು ಈಡೇರಿಸುವಲ್ಲಿ ವಿಫಲವಾಗಿರುವುದರಿಂದ ಸಂಘದಲ್ಲಿ ನಿವೇಶನ ಠೇವಣಿ ಇಟ್ಟ ಸದಸ್ಯರು ನಿವೇಶನ ಠೇವಣಿ ವಾಪಸಾತಿಗಾಗಿಯೇ ಆಗಲೀ ಅಥವಾ ನಿವೇಶನ ಪಡೆಯುವುದಕ್ಕಾಗಿ ಪ್ರತ್ಯೇಕವಾಗಿ ಈ ಇಲಾಖೆಯಲ್ಲಿ ವ್ಯವಹರಿಸುವುದರಿಂದ, ಸಂಘದಲ್ಲಿ ನೈಜ, ಸದಸ್ಯರು ಠೇವಣಿ ಇಟ್ಟಿರುವ ಬಗ್ಗೆ ಸಂಶಯ ಉಂಟಾಗಿರುತ್ತದೆ ಎಂಬುದಾಗಿ ಅಭಿಪ್ರಾಯಪಟ್ಟು, ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವಾಗಿರುತ್ತದೆ ಎಂದು ತಿಳಿಸಿದ್ದಾರೆ.

**ಆರೋಪ-2:-** ಸಂಘವು ಕರ್ನಾಟಕ ರಾಜ್ಯ ಗೌ: ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:51576/98 ರಂತೆ ಪ್ರಕರಣ ದಾಖಲಿಸಿದ್ದು, ನ್ಯಾಯಾಲಯವು ಆದೇಶ ಹೊರಡಿಸಿ ಸದರಿ ಸಂಘದ ಸಮಾಪನೆಯ ಬಗ್ಗೆ ನಿಯಮಾನುಸಾರ ಮೂರು ತಿಂಗಳೊಳಗಾಗಿ ಕ್ರಮ ತೆಗೆದುಕೊಳ್ಳಲು ಸೂಚಿಸುತ್ತದೆ.

**ಆರೋಪ-3:-** ಸಂಘವು 15 ವರ್ಷಗಳಿಂದ ಕೇವಲ ಚಿಕ್ಕಬೆಟ್ಟಹಳ್ಳಿ ಸರ್ವೆ ನಂ.37-38/1 ರಲ್ಲಿರುವ 4 ಎಕರೆ 16 1/2 ಗುಂಟೆ ಜಮೀನನ್ನು ನ್ಯಾಯಾಲಯದ ಮುಖಾಂತರ ಸ್ವಾಧೀನಪಡಿಸಿಕೊಳ್ಳುವ ಕಾನೂನು ಸಮರಕ್ಕಾಗಿ ಸಂಘವನ್ನು ಬಳಸಿಕೊಳ್ಳುವ ಹುನ್ನಾರ ನಡೆಸಿರುತ್ತದೆ. ಈ ಜಮೀನಿನ ಮೂಲ ಮಾಲೀಕರಿಂದ ಸಂಘದ ಅಧ್ಯಕ್ಷರಾದ ಶ್ರೀ ರೆಡ್ಡಪ್ಪ ಇವರು ಸಂಘ ಮತ್ತು ಅವರ ಸ್ವಂತ ಹೆಸರಿಗೆ 15 ವರ್ಷಗಳ ಹಿಂದೆಯೇ ಕರಾರು ಮಾಡಿಕೊಂಡಿದ್ದು, ಇದನ್ನು ಸಂಘದ ಸದಸ್ಯರಿಗೆ ಎಂಬ ನೆಪವನ್ನು ಒಡ್ಡಿ ಅವರದ್ದೇ ಆದ ಕೆಲವು ಜನರನ್ನು ಸದಸ್ಯರನ್ನಾಗಿ ಮಾಡಿಕೊಂಡು ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಕಾನೂನು ಸಮರದಲ್ಲಿ ತೊಡಗಿರುವುದು ಕಂಡುಬರುತ್ತದೆ. ಆದರೆ ಈ ಸದಸ್ಯರುಗಳು ಸಂಘದ ನೈಜ ಸದಸ್ಯರಲ್ಲಿ ಎಂಬುದು ಸಹಾಯಕ ನಿಬಂಧಕರ ವಿಚಾರಣಾ ವರದಿಯಿಂದ ಕಂಡುಬಂದಿರುತ್ತದೆ. ಸದರಿ ಜಮೀನಿನ ಮಾಲೀಕರ ಮಕ್ಕಳು ಇದೇ ಜಮೀನನ್ನು ಬೇರೊಬ್ಬ ಖಾಸಗಿಯವರಿಗೆ ಕರಾರು ಪತ್ರ ಮಾಡಿಕೊಟ್ಟಿದ್ದು, ಇದು ಸಿವಿಲ್ ನ್ಯಾಯಾಲಯದಲ್ಲಿ ಇತ್ಯರ್ಥಗೊಂಡಿದ್ದು, ತದನಂತರ ಗೌ: ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿ ಬಾಕಿ ಇರುತ್ತದೆ. ಎರಡೂ ಗುಂಪಿನವರೂ ಈ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಈ ರೀತಿ ಕಾನೂನು ಸಮರದಲ್ಲಿ ತೊಡಗಿದ್ದು, ಈ ವಿಚಾರವಾಗಿ ಪದೇ ಪದೇ ಸರ್ಕಾರದಿಂದ ವಿಚಾರಣೆ ನಡೆಸಲು ಅರ್ಜಿಗಳು ಬರುತ್ತಿರುತ್ತವೆ. ಇತ್ತೀಚೆಗೆ ನಡೆದಿರುವ ಸಹಾಯಕ ನಿಬಂಧಕರ ವಿಚಾರಣಾ ವರದಿ ಹಾಗೂ ಈ ಹಿಂದೆ ನಡೆದ ಶಾಸನಬದ್ಧ ಕಲಂ 65 ರ ಪರವೀಕ್ಷಣಾ ವರದಿಯಿಂದ ಸಾಬೀತಾಗಿರುವಂತೆ ಸದರಿ ಸಂಘವು ಯಾವ ಉದ್ದೇಶಕ್ಕಾಗಿ ಸ್ಥಾಪನೆಯಾಯಿತೋ ಆ ಉದ್ದೇಶಗಳನ್ನು ಈಡೇರಿಸುವಲ್ಲಿ ಸಫಲವಾಗಿರುವುದಿಲ್ಲ. ಅಲ್ಲದೇ ಸಂಘದ ಸದಸ್ಯರು ಸಹ ನೈಜ ಸದಸ್ಯರಾಗಿರುವುದಿಲ್ಲ. ಏಕೆಂದರೆ ಅವರ್‍ಯಾರು ಇದುವರೆಗೆ ಕಳೆದ 15 ವರ್ಷಗಳಿಂದ ಅವರುಗಳಿಗೆ ಸಂಘದಿಂದ ನಿವೇಶನ ದೊರಕದಿರುವ ಬಗ್ಗೆ ಅಥವಾ ಅವರು ಪಾವತಿಸಿರುವ ನಿವೇಶನ ಮುಂಗಡ ವಾಪಸ್ಸು ಬಾರದಿರುವ ಬಗ್ಗೆ ಯಾವುದೇ ದೂರುಗಳನ್ನು ಇಲಾಖೆಯ ಯಾವುದೇ ಕಛೇರಿಗಳಿಗೆ ಸಲ್ಲಿಸಿರುವುದಿಲ್ಲ.

**ಆರೋಪ-4:-** ಸಹಾಯಕ ನಿಬಂಧಕರು, 1ನೇ ವೃತ್ತ, ಇವರು ವಿಚಾರಣಾ ಸಂದರ್ಭದಲ್ಲಿ ಸಂಘದ ಸದಸ್ಯರಿಗೆ ನೊಂದಾಯಿತ ಅಂಚೆ ಸ್ವೀಕೃತಿಯೊಂದಿಗೆ ನೋಟೀಸ್‌ಗಳನ್ನು ನೀಡಿ ಅವರ ಸಮಸ್ಯೆಗಳನ್ನು ಸಲ್ಲಿಸಲು ತಿಳಿಸಿದಾಗ್ಯೂ ವಿಚಾರಣೆಗೆ ಹಾಜರಾಗಿ ಅವರ ಅಭಿಪ್ರಾಯ, ಸಲಹೆ ಮತ್ತು ಸಮಸ್ಯೆಗಳ ಬಗ್ಗೆ ವಿವರಣೆ ನೀಡಿರುವುದಿಲ್ಲ.

**ಆರೋಪ-5:-** ಅಲ್ಲದೇ ಅತಿ ಮುಖ್ಯವಾಗಿ ಸಂಘದ ಅಧ್ಯಕ್ಷರಾದ ಶ್ರೀ ರೆಡ್ಡಪ್ಪ ಚೆಟ್ಟಿ ರವರನ್ನು ಹೊರತುಪಡಿಸಿ ಇತರೆ ಆಡಳಿತ ಮಂಡಳಿ ಸದಸ್ಯರುಗಳಾರೂ ಈ ಸಂಘದ ಏಳಿಗೆಯ ಬಗ್ಗೆಯಾಗಲೀ ಸಮಸ್ಯೆಗಳ ಬಗ್ಗೆಯಾಗಲೀ, ಇಲಾಖೆಯೊಡನೆ ಯಾವುದೇ ವ್ಯವಹಾರವನ್ನು ನಡೆಸಿರುವುದಿಲ್ಲ. ಇದನ್ನು ಪರಿಶೀಲಿಸಿದಾಗ ಇದು ಕೇವಲ ಒಬ್ಬ ವ್ಯಕ್ತಿಯ ಅನುಕೂಲಕ್ಕಾಗಿ ಸೃಷ್ಟಿಸಿಕೊಂಡಿರುವ ಸಂಘವೆಂದು ಕಂಡುಬರುತ್ತದೆ. ಆದ್ದರಿಂದ ಸಹಕಾರ ತತ್ವಕ್ಕೆ ವಿರುದ್ಧವಾದ ಇಂತಹ ನಿಷ್ಕ್ರಿಯ ಹಾಗೂ ದುರುದ್ದೇಶದಿಂದ ಸ್ಥಾಪನೆಯಾಗಿರುವ ಈ ಸಂಘವನು ಮುಂದುವರೆಸಿಕೊಂಡು ಹೋಗದೆ ಈ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವಾಗಿದೆ.

ಮೇಲೆ ತಿಳಿಸಿದ ಅಂಶಗಳನ್ನು ಗಮನಿಸಿ ಸರ್ಕಾರವು ಸದರಿ ಸಂಘವನ್ನು ಸಮಾಪನೆಗೊಳಿಸಲು ಅನುನೋದನೆಯನ್ನು ಉಲ್ಲೇಖ(2)(3) ರಲ್ಲಿರುವ ಪತ್ರದಲ್ಲಿ ನೀಡಿರುತ್ತದೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರಂತೆ ಸಂಘವನ್ನು ಏಕೆ ಸಮಾಪನೆಗೊಳಿಸಬಾರದೆಂದು ಉಲ್ಲೇಖ(4)ರಲ್ಲಿ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ್ದು, ಸದರಿ ಸಂಘದ ಆಡಳಿತ ಮಂಡಳಿಯು ನಿಗದಿತ ವೇಳೆಯಲ್ಲಿ ಉತ್ತರ ನೀಡದ ಕಾರಣ ಹಾಗೂ ಉತ್ತರವು ಸಮಂಜಸವಾಗದೆ ಇರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(1)ರನ್ವಯ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಶ್ರೀ ಕೆ.ಹೆಚ್. ಗೋಪಾಲಕೃಷ್ಣೇಗೌಡ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ ಬೆಂಗಳೂರು ಆದ ನಾನು ಅಗರಬತ್ತಿ ವರ್ಕರ್ಸ್ ಅಂಡ್ ಅದರ್ಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ (ನಿ) ಬೆಂಗಳೂರು ಇದನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು 1ನೇ ವಲಯ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಆದೇಶ ಹೊರಡಿಸಿದ ದಿನಾಂಕದ ಒಂದು ವಾರದೊಳಗೆ ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33 ರಂತೆ ಸಮಾಪನಾಧಿಕಾರಿಯ

ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯಾಧರಿಸಿ ಆದ್ಯತಾ ಪಟ್ಟಿಯನ್ನು ತಯಾರಿಸಿ ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ-ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ 6.11.2004 ರಂದು ನೀಡಲಾಗಿದೆ.

**ಕೆ.ಹೆಚ್. ಗೋಪಾಲಕೃಷ್ಣೇಗೌಡ**

ಪಿ.ಆರ್. 1577 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ:441:ಡಿಟಿಸಿಆರ್:1999-2000 ದಿನಾಂಕ: 28ನೇ ಅಕ್ಟೋಬರ್ 2004**

**ಉಪಸ್ಥಿತರು** : ಗೋವಿಂದಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು,
ನಂ.3, ಅಧಿಕಾರಿ ಗುಪ್ತ ವಾರ್ತಾದಳ,
ಮಂಗಳೂರು ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು:**
1. ರಂಗಸ್ವಾಮಿ (ವಾಹನ ಚಾಲಕ) ಬಿನ್: ದೊಡ್ಡ ಹೊನ್ನಯ್ಯ ಟಿ.ಜಿ. ಪಾಳ್ಯ ತಿಪ್ಪಸಂದ್ರ ಅಂಚೆ, ಹೋಬಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ.
2. ಎಸ್.ಸಿ. ರಂಗನಾಥ, (ಕ್ಲೀನರ್) ಬಿನ್:ಎಸ್.ಆರ್. ಪಾಂಡುರಂಗಯ್ಯ ರಂಗನಾಥ ನಿಲಯ, ಮಾರುತಿ ಸ್ಕೂಲ್ ಹತ್ತಿರ, ತುಮಕೂರು.
3. ಲಕ್ಷ್ಮೀ ನರಸಿಂಹ ರೆಡ್ಡಿ, ಬಿನ್: ರಾಮ ರೆಡ್ಡಿ, ನಂ:28, 9ನೇ ಕ್ರಾಸ್, 1ನೇ ಎನ್ ಬ್ಲಾಕ್, ರಾಜಾಜಿನಗರ, ಬೆಂಗಳೂರು (ವಾಹನ ಮಾಲೀಕರು)

**ಅರ್ಜಿದಾರರು**
1. ಬಿ. ಕುಮಾರ್, ನಂ:27 9ನೇ ಕ್ರಾಸ್, 1ನೇ ಎನ್ ಬ್ಲಾಕ್, ಬೆಂಗಳೂರು.
2. ಲಕ್ಷ್ಮೀನರಸಿಂಹ ರೆಡ್ಡಿ, ಬಿನ್: ರಾಮ ರೆಡ್ಡಿ, ನಂ:28, 9ನೇ ಕ್ರಾಸ್, 1ನೇ ಎನ್ ಬ್ಲಾಕ್, ರಾಜಾಜಿನಗರ, ಬೆಂಗಳೂರು (ವಾಹನ ಮಾಲೀಕರು)

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 24.2.2000 ರಂದು ಸಂಜೆ 4.30 ಸಮಯಕ್ಕೆ ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಇವರು ತಮ್ಮ ಉಪ ಅಧೀಕ್ಷಕರು ಹಾಗೂ ಸಿಬ್ಬಂದಿಯೊಂದಿಗೆ ಮಂಗಳೂರು ತಾಲ್ಲೂಕು ಅಡ್ಯಾರು ಸಾಲುಮರದ ಹತ್ತಿರ ಆರ್.ಕೆ. ಗ್ಯಾರೇಜಿನ ಮುಂಭಾಗದಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ, ಬೆಂಗಳೂರು ಕಡೆಯಿಂದ ಮಂಗಳೂರು ಕಡೆಗೆ ಬರುತ್ತಿದ್ದ ಲಾರಿ ಸಂಖ್ಯೆ: ಸಿಟಿಎಕ್ಸ್:8158ನ್ನು ನಿಲ್ಲಿಸಲು, ಚಾಲಕನ ಪಕ್ಕದಲ್ಲಿ ಒಬ್ಬ ವ್ಯಕ್ತಿಯು ಕುಳಿತಿದ್ದು, ವಾಹನದಲ್ಲಿರುವ ಸರಕಿನ ಬಗ್ಗೆ ವಿಚಾರಿಸಲು ಚಾಲಕನ ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿಯು ನೀರುಳ್ಳಿಯೆಂದು ತಿಳಿಸಿರುತ್ತಾನೆ. ಸದ್ರಿ ಲಾರಿಯಲ್ಲಿ ಈರುಳ್ಳಿ ಚೀಲಗಳನ್ನು ಹೇರಿದ್ದು ಕಂಡುಬರುತ್ತಿದ್ದು, ಅಲ್ಲದೆ ಚಾಲಕನು ಸಂಶಯಾಸ್ಪದವಾಗಿ ವರ್ತಿಸುತ್ತಿದ್ದು ಸರಕಿನಿಂದ ಮದ್ಯದ ವಾಸನೆ ಸಹಾ ಬರುತ್ತಿದ್ದು, ಲಾರಿಯನ್ನು ಶೋಧನೆ ಮಾಡಲು ತೀರ್ಮಾನಿಸಿ ಸ್ಥಳದಲ್ಲಿದ್ದ ಪಂಚರನ್ನು ಬರಮಾಡಿಕೊಂಡು ನ್ಯಾಯಾಲಯದಿಂದ ವಾರೆಂಟು ಪಡೆದುಕೊಳ್ಳಲು ಕಾಲಾವಕಾಶವಿಲ್ಲದ ಕಾರಣ ಸರ್ಚ್ ಮೆಮೋ ತಯಾರಿಸಿ ಲಾರಿಯಲ್ಲಿದ್ದ ಟಾರ್ಪಾಲನ್ನು ಮತ್ತು ನೀರುಳ್ಳಿ ಚೀಲಗಳನ್ನು ಸರಿಸಿ ನೋಡಲಾಗಿ ನೀರುಳ್ಳಿ ಚೀಲಗಳ ಕೆಳಗೆ ಮದ್ಯ ತುಂಬಿದ ಪೆಟ್ಟಿಗೆಗಳು ಇರುವುದು ಕಂಡುಬಂತು. ಲಾರಿಯಲ್ಲಿದ್ದ ಸರಕನ್ನು ವಿವರವಾಗಿ ಪರಿಶೀಲನೆ ಮಾಡಲಾಗಿ ಮದ್ಯದ ಪೆಟ್ಟಿಗೆಗಳಿಗೆ ಮುಚ್ಚಿದ 62 ಈರುಳ್ಳಿ ಚೀಲಗಳು ಪತ್ತೆಯಾಗಿದ್ದು ಸದ್ರಿ ಚೀಲಗಳ ಕೆಳಗಡೆ ಈ ಕೆಳಗೆ ನಮೂದಿಸಿರುವ ಮದ್ಯದ ಪೆಟ್ಟಿಗೆಗಳು ಇರುವುದು ಕಂಡುಬಂದಿರುತ್ತದೆ.

| | | | |
|---|---|---|---|
| 1. | ಮೆಕ್‌ಡೊವೆಲ್ ವಿಸ್ಕಿ | 750 ಮಿಲಿ X 12 | - 7 ಪೆಟ್ಟಿಗೆಗಳು |
| 2. | ಮೆಕ್‌ಡೊವೆಲ್ ವಿಸ್ಕಿ | 180 ಮಿಲಿ X 48 | - 43 ಪೆಟ್ಟಿಗೆಗಳು |
| 3. | ಬ್ಯಾಗ್‌ಪೈಪರ್ ವಿಸ್ಕಿ | 750 ಮಿಲಿ X 12 | - 24 ಪೆಟ್ಟಿಗೆಗಳು |
| 4. | ಬ್ಯಾಗ್‌ಪೈಪರ್ ವಿಸ್ಕಿ | 375 ಮಿಲಿ X 24 | - 74 ಪೆಟ್ಟಿಗೆಗಳು |
| 5. | ಬ್ಯಾಗ್‌ಪೈಪರ್ ವಿಸ್ಕಿ | 180 ಮಿಲಿ X 48 | - 250 ಪೆಟ್ಟಿಗೆಗಳು |
| 6. | ಬ್ಯಾಗ್‌ಪೈಪರ್ ಗೋಲ್ಡ್ ವಿಸ್ಕಿ | 750 ಮಿಲಿ X 12 | - 12 ಪೆಟ್ಟಿಗೆಗಳು |
| 7. | ಬ್ಯಾಗ್‌ಪೈಪರ್ ಗೋಲ್ಡ್ ವಿಸ್ಕಿ | 375 ಮಿಲಿ X 24 | - 10 ಪೆಟ್ಟಿಗೆಗಳು |
| 8. | ಬ್ಯಾಗ್‌ಪೈಪರ್ ಗೋಲ್ಡ್ ವಿಸ್ಕಿ | 180 ಮಿಲಿ X 48 | - 20 ಪೆಟ್ಟಿಗೆಗಳು |
| | | **ಒಟ್ಟು** | **440 ಪೆಟ್ಟಿಗೆಗಳು** |

ಮೇಲೆ ವಿವರಿಸಿದಂತೆ 440 ಪೆಟ್ಟಿಗೆಗಳಲ್ಲಿ 3847.320 ಲೀಟರು ಮದ್ಯವು ಪತ್ತೆಯಾಗಿದ್ದು ಸದ್ರಿ ಮದ್ಯವನ್ನು ಹೊಂದಿ ಸಾಗಣೆ ಮಾಡಲು ರಹದಾರಿ ಪತ್ರವನ್ನು ವಿಚಾರಿಸಲಾಗಿ ಯಾವುದೇ ರಹದಾರಿ ಪತ್ರವನ್ನು ಹಾಜರುಪಡಿಸಿರುವುದಿಲ್ಲ. ಆದುದರಿಂದ ಇದು ಅಕ್ರಮ ಮದ್ಯ ಸಾಗಾಟವೆಂದು ತೀರ್ಮಾನಿಸಿ ಮದ್ಯವನ್ನು ಪರಿಶೀಲನೆ ಮಾಡಲಾಗಿ ಸದ್ರಿ ಮದ್ಯವು ಕರ್ನಾಟಕ ಡಿಸ್ಟಿಲರೀಸ್ ಮತ್ತು ಬ್ರೇವರೀಸ್ ತುಮಕೂರು ರಸ್ತೆ, ಬೆಂಗಳೂರು ಇಲ್ಲಿ ತಯಾರಿಸಲಾದ ಮದ್ಯವೆಂದು ಪತ್ತೆಯಾಗಿರುತ್ತದೆ. ಮೇಲಿನ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 750 ಮಿಲಿಯ 3 ಶೀಷೆಗಳು, 375 ಮಿಲಿಯ 3

